# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು: ಎಚ್ಚೆಸ್ಕೆ

ಈ ಸಂಚಿಕೆಯಲ್ಲಿ




ಅಕ್ಟೋಬರ್ ೧೯೮೪




ಸಮನ್ವಯ ಸಮಿತಿ (ರಿ.)
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು
ನಗರ ಶಾಖೆ ಬೆಂಗಳೂರು 560002

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

# Sensation



*"The enchanting fragrance of Sensation enables me to attain sublime heights and maintain classical excellence in my music"*

— *Ustad Amjad Ali Khan*






From the makers of Sugandha Shringar & Shirin Agarbathis



**ARAVINDA PARIMALA WORKS,**
**MYSORE 570 004**

# ಬ್ಯಾಂಕಿಂಗ ಪ್ರಪಂಚ

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

ಸಂಪುಟ ೫ ಅಕ್ಟೋಬರ್ ೧೯೮೪ ಸಂಚಿಕೆ ೨

ಸಂಪಾದಕ: ಎಚ್ಚೆಸ್ಕೆ



**ಸಮನ್ವಯ ಸಮಿತಿ (ರಿ.)**

(ಭಾರತೀಯ ಸ್ಟೇಟ್ ಬ್ಯಾಂಕ್
ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

**ವಾರ್ಷಿಕ ಚಂದಾ ರೂ. ೭**
**ಆಜೀವ ಚಂದಾ ರೂ. ೧೦೦**
**ಬಿಡಿ ಪ್ರತಿ ರೂ. ೪**

## 'ಬ್ಯಾಂಕಿಂಗ್ ಪ್ರಪಂಚದ ಆಜೀವ ಚಂದಾದಾರರು
(ಹಿಂದಿನ ಸಂಚಿಕೆಯಿಂದ)

124 ಶೃಂಗೇಶ್ವರ ಶರ್ಮ
125 ಎ. ಎಲ್. ದೇಸಾಯಿ
126 ಸ್ಟೇಟ್ ಬ್ಯಾಂಕ್ ಆಫ್ ಮೈಸೂರು
ಶಿವನಸಮುದ್ರ ಶಾಖೆ–571 437
127 ಮೇ. ಕೃ. ನಾರಾಯಣ
128 ಎಂ. ಎಸ್. ರಂಗನಾಥ್
129 ಶಿವರಾಮ ಕುಞಾಡಿ
130 ಬಿ. ವಿ. ವಿನೋದ
131 ಟಿ. ಆರ್. ಶೆಣೈ
132 ಶಿವರಾಜ್
133 ಎ. ವಿ. ರಾಜನ್
134 ಹೆಚ್. ನರಸಿಂಹರಾವ್
135 ಜಿ. ರಾಮನಾಥನ್
136 ಬಿ. ಎಸ್. ರಾಮಕೃಷ್ಣ
137 ಎಂ. ಕೆ. ನಾಗರಾಜರಾವ್
138 ಎಂ. ವಿ. ಮುರಳೀಧರ
139 ಹಾ. ಪು. ನಟೇಶ
140 ಸುಬ್ರಾಯ ಕಾರಂತ
141 ಓಂಪ್ರಕಾಶ್
142 ತ. ಭೀ. ಸುಬ್ರಹ್ಮಣ್ಯಂ
143 ವೆ. ಅಣ್ಣಯ್ಯ
144 ಮ್ಯಾನ್ಯುಯಲ್ ಡಿಸೋಜ
145 ಎಂ. ಜಿ. ವೆಂಕಟಾಚಲಂ
146 ಪಿ. ಕೋದಂಡರಾಮು

ಭಾರತೀಯ ಸ್ಟೇಟ್ ಬ್ಯಾಂಕಿನ ಈ ಮುಂದಿನ ಶಾಖೆಗಳು :

147 ವೆಸ್ಟ್ ಆಫ್ ಕಾರ್ಡ್ ರೋಡ್
148 ಎ. ಎಸ್. ಸಿ. ಸೆಂಟರ್ (ಸೌತ್)
149 ಮಲ್ಲೇಶ್ವರಂ
150 ಜಯನಗರ II ಬ್ಲಾಕ್
151 ಜಯನಗರ IV 'ಟಿ' ಬ್ಲಾಕ್
152 ವಿಶ್ವೇಶ್ವರಪುರಂ
153 ಏರ್ ಕಾರ್ಗೊ ಕಾಂಪ್ಲೆಕ್ಸ್
154 ಸಿರಿಗೆರೆ
155 ಬೆಳಗಾಂ, ಎ.ಡಿ.ಬಿ.
156 ದೂರವಾಣಿನಗರ
157 ಚಿಂತಾಮಣಿ
158 ಜೀವನ ಬಿಮಾ ನಗರ
159 ಎನ್. ಎ. ಎಲ್.
160 ಎಂ. ಇ. ಜಿ. ಸೆಂಟರ್
161 ಕುಡಿತಿನಿ
162 ಮಲ್ಲೇಶ್ವರ (ಕುದುರೆಮುಖ)
163 ಸುಲೇಭಾವಿ
164 ರಾಜಾಜಿನಗರ
165 ಶಿವಪುರ
166 ಮೂಡಬಿದರೆ
167 ಬಾದಾಮಿ
168 ಕಂಕನಾಡಿ
169 ಚಿಕ್ಕೋಡಿ ಎ.ಡಿ.ಬಿ
170 ಚಿತ್ರದುರ್ಗ
171 ಶಿವಮೊಗ್ಗ
172 ಚಿತ್ರಾಕುಲ (ಸದಾಶಿವಘಡ)
173 ಬನಹಟ್ಟಿ
174 ಚಿಕ್ಕಬಳ್ಳಾಪುರ
175 ಸಾಗರ
176 ಯಶವಂತಪುರ
177 ಯು. ಎ. ಎಸ್. ಕ್ಯಾಂಪಸ್ (ಹೆಬ್ಬಾಳ)
178 ಪೀಣ್ಯ
179 ಕಾರವಾರ
180 ಎಲ್. ಆರ್. ಡಿ. ಇ.
181 ಬೆಳಗಾವಿ
182 ಕೋಲಾರ
183 ಜೆ. ಪಿ. ನಗರ
184 ರೇಸ್ ಕೋರ್ಸ್ ರಸ್ತೆ
185 ಸಿಟಿ ಮಾರ್ಕೆಟ್
186 ಹೊಸ ತರಗುಪೇಟೆ
187 ಬಸವನಗುಡಿ
188 ಕಾವೇರಿ ಭವನ
1.9 ಬೆಂಗಳೂರು ಮೆಡಿಕಲ್ ಕಾಲೇಜು
190 ಕುಮಾರಾ ಪಾರ್ಕ್
191 ಉಡುಪಿ
192 ಗೌರ್ನಮೆಂಟ್ ಎಸ್ಟೇಟ್ (ಬೆಳಗಾವಿ)
193 ವಿಲ್ಸನ್ ಗಾರ್ಡನ್

194 ಬನಶಂಕರಿ II ಘಟ್ಟ
195 ಕನ್ನೂರು
196 ಬಸವನ ಬಾಗೇವಾಡಿ
197 ಕೊಲ್ಹಾರ
198 ಹೊಸಪೇಟೆ
199 ಹಾರುಗೇರಿ
200 ಯಾದಗಿರಿ
201 ಮಂಗಳೂರು
202 ಬಾಗಲಕೋಟೆ
203 ಚನ್ನರಾಯಪಟ್ಟಣ
204 ಮಹದೇವಪುರ
205 ಕೆ. ಆರ್. ನಗರ
206 ವೀರರಾಜಪೇಟೆ
207 ಹಿರೇಕೆರೂರು
208 ಸ್ಥಳೀಯ ಪ್ರಧಾನ ಕಛೇರಿ
209 ಹೆಚ್.ಎ.ಎಲ್.
210 ಕುಮಟ
211 ಗಾಂಧಿ ಕೃಷಿವಿಜ್ಞಾನ ಕೇಂದ್ರ
212 ಜಾಲಹಳ್ಳಿ
213 ದಾವಣಗೆರೆ
214 ಚರ್ಚ್ ಸ್ಟ್ರೀಟ್
215 ಕೊಡಗಾನೂರು
216 ಮಡಿಕೇರಿ
217 ಜಮಖಂಡಿ ಎ.ಡಿ.ಬಿ.
218 ಬಂಟ್ವಾಳ ಕ್ರಾಸ್ ರೋಡ್
219 ಭಾಂಕುರ್ ಇಂಡಸ್ಟ್ರಿಯಲ್ ಎಸ್ಟೇಟ್
220 ಮೈಸೂರು
221 ಮೈಸೂರು ಸೌತ್, ಮೈಸೂರು

---

# ಈ ಸಂಚಿಕೆಗೆ ಲೇಖನ ನೀಡಿರುವವರು

**ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್** : ಎಚ್ಚೆಸ್ಕೆ, 'ಬ್ಯಾಂಕಿಂಗ್ ಪ್ರಪಂಚ'ದ ಸಂಪಾದಕ

**ಕೆ. ಆರ್. ಕಶ್ಯಪ್** : ಮಾರುಕಟ್ಟೆ ಅಭಿವೃದ್ಧಿ ನಿರ್ವಾಹಕ, ಹಿಂದೂಸ್ತಾನ್ ಕಂಪ್ಯೂಟರ್ಸ್ ಲಿಮಿಟೆಡ್, ಬೆಂಗಳೂರು

**ಜಿ. ಶಾಂತಾರಾಂ** : ಅಧಿಕಾರಿ, ಸಿಬ್ಬಂದಿ ಇಲಾಖೆ, ಭಾರತೀಯ ಸ್ಟೇಟ್ ಬ್ಯಾಂಕ್, ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು 1

**ಟಿ. ವಿ. ಕಿಣಿ** : ಪ್ರಧಾನ ವ್ಯವಸ್ಥಾಪಕ (ಕಾರ್ಯನಿರ್ವಹಣೆ), ಭಾರತೀಯ ಸ್ಟೇಟ್ ಬ್ಯಾಂಕ್, ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು 1

**ಸಿ. ಎಂ. ಶಾಂತವೀರಯ್ಯ** : ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಹೊಸಪೇಟೆ

**ಕೆ. ಎನ್. ಮಹಾಬಲ** : ಭಾರತೀಯ ಸ್ಟೇಟ್ ಬ್ಯಾಂಕ್, ಸೇಂಟ್ ಮಾರ್ಕ್ಸ್ ರಸ್ತೆ ಶಾಖೆ, ಬೆಂಗಳೂರು

**ಅತ್ತೂರು ಚೈಯುಬ್ಬ** : ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಮಂಡ್ಯ

**ಟಿ. ಕೆ. ರಂಗನಾಥ** : ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಳಗಾವಿ ಶಾಖೆ

**ಎಚ್. ಎಸ್. ಕೃಷ್ಣ** : ಅಧಿಕಾರಿ, ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ, ಮೈಸೂರು

**ಶಾಂತರಾಜು** : ಉಪಕಾರ್ಯದರ್ಶಿ ಅಖಿಲ ಭಾರತೀಯ ಸ್ಟೇಟ್ ಬ್ಯಾಂಕ್ ಅಧಿಕಾರಿಗಳ ಒಕ್ಕೂಟ ; ಸಂಘಟನಾ ಕಾರ್ಯದರ್ಶಿ, ಅಖಿಲ ಭಾರತ ಬ್ಯಾಂಕ್ ಅಧಿಕಾರಿಗಳ ಸಂಘಗಳ ಒಕ್ಕೂಟದ ರಾಜ್ಯಘಟಕ

**ಮುರಲೀಧರ** : ಅಧಿಕಾರಿ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ತಿಪಟೂರು

**ಚಂದ್ರಶೇಖರ್** : ವಿಜಯಾ ಬ್ಯಾಂಕ್, ಪ್ರಧಾನ ಕಛೇರಿ, ಬೆಂಗಳೂರು

**ಬಿ. ಎಸ್. ಶ್ರೀನಿವಾಸ್** : ಭಾರತೀಯ ಸ್ಟೇಟ್ ಬ್ಯಾಂಕ್, ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು

**ಪಾ. ರಾಜಗೋಪಾಲ** : ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಪ್ರಾದೇಶಿಕ ಕಛೇರಿ, ಬೆಂಗಳೂರು 1 ; ಪ್ರಧಾನ ಕಾರ್ಯದರ್ಶಿ, ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ, ಬೆಂಗಳೂರು 2

**ಜಿ. ಎನ್. ನರಸಿಂಹಮೂರ್ತಿ** : ಮುಖ್ಯ ನಗದಿಗಾರ, ಭಾರತೀಯ ಸ್ಟೇಟ್ ಬ್ಯಾಂಕ್, ಹೊಸಪೇಟೆ

---

# ಸಂಪಾದಕೀಯ

---

**ಏರು ಬೆಲೆ**

ದೇಶದಲ್ಲಿ ಈಗ ಬಹಳ ಆತಂಕ. ಬೆಲೆಗಳು ಒಂದೇ ಸಮನೆ ಏರುತ್ತಲೇ ಇವೆ. ಇದು ಅಪಾಯದ ಚಿಹ್ನೆ. ಆರ್ಥಿಕ ಆರೋಗ್ಯ ಕೆಟ್ಟಾಗ ಜ್ವರದ ಕಾವು ಏರುತ್ತದೆ. ಇದಕ್ಕೆ ಕಾರಣಗಳು ಹಲವಾರು : ಆರ್ಥಿಕ, ರಾಜಕೀಯ, ಮಾನಸಿಕ. ಹೀಗೆಂದು ಪರಿಸ್ಥಿತಿಯನ್ನು ವಿಶ್ಲೇಷಿಸುವುದು ಸಾಧ್ಯ. ಇಂಥ ವಿಶ್ಲೇಷಣೆ ಅಗತ್ಯ ಕೂಡ.

ಆದರೆ ಎಲ್ಲ ವಿಶ್ಲೇಷಣೆಗಳನ್ನೂ ಮೀರಿ ಬೆಲೆಗಳು ಒಗಟಿನಂತೆ ವರ್ತಿಸುತ್ತಿವೆ. ಸರಕು ಪೂರೈಕೆ ಯಥೇಚ್ಛವಾದಾಗ ಬೆಲೆಗಳು ತಂತಾವೇ ಹದ್ದುಬಸ್ತಿಗೆ ಒಳಪಡಬೇಕು—ಎಂಬುದು ಪಠ್ಯಪುಸ್ತಕದ ಸೂತ್ರ. ಆ ದೃಷ್ಟಿಯಿಂದ ನೋಡಿದಾಗ ಈ ವರ್ಷ ಆತಂಕಕ್ಕೆ ಕಾರಣ ಇರಬಾರದು. ಫಸಲು ಯಥೇಚ್ಛವಾಗಿದೆ. ಆಹಾರ, ಕಚ್ಚಾ ಸಾಮಗ್ರಿಗಳ ಪೂರೈಕೆಗೆ ಕೊರತೆಯಿಲ್ಲ. ಈ ವರ್ಷವೂ ಒಟ್ಟಿನಲ್ಲಿ ದೇಶದಲ್ಲಿ ಮಳೆ ಇದುವರೆಗೆ ಚೆನ್ನಾಗಿ ಆಗಿದೆ. ಬೆಳೆಯೂ ಗುರಿ ಮುಟ್ಟೀತು. ಸರಕಾರಿ ಹಾಗೂ ಖಾಸಗಿ ಕಣಜಗಳು ತುಂಬಿ ತುಳುಕುತ್ತಿವೆ. ಸರಕಾರಕ್ಕಂತೂ, ಸಂಗ್ರಹವಾದ ಕಾಳನ್ನು ಹೇಗೆ ದಾಸ್ತಾನು ಮಾಡಿಡುವುದೆಂಬುದೇ ಸಮಸ್ಯೆ. ಇನ್ನೊಂದೆರಡು ವರ್ಷವಂತೂ ಆಹಾರ ಅಭಾವ ಇರಲಾರದು. ಆದಾಗ್ಯೂ ಆಹಾರ ಬೆಲೆಗಳು ಇಳಿಯದೆ ಸತಾಯಿಸುತ್ತಿವೆ ; ಮೇಲೆ ಮೇಲೆ ಏರುತ್ತಿವೆ—ರಾವಣನ ಆಸ್ಥಾನದಲ್ಲಿ ಬಾಲದ ಸುರುಳಿ ಸುತ್ತಿ, ರಾವಣನ ಸಿಂಹಾಸನಕ್ಕಿಂತ ಎತ್ತರದಲ್ಲಿ ಕುಳಿತ ಆಂಜನೇಯನ ಹಾಗೆ ! ಏಕೆ ಹೀಗೆ ಎಂಬುದೇ ಅರ್ಥವಾಗದಂತಾಗಿದೆ.

ಸಮೃದ್ಧಿಯೇ ಸಂಕಷ್ಟಕ್ಕೆ ಮೂಲ ಎಂಬುದಾಗಿಯೇ ಶಂಕಿಸಬೇಕೇನೋ. ಫಸಲು ಸಮೃದ್ಧಿಯಾದ್ದರಿಂದ ಜನರ ಕೈಗೆ ಹೆಚ್ಚು ಹಣ ಬಂದಿದೆ. ಸರಕಿನ ಪರಿಮಾಣ ಹೆಚ್ಚಾದ್ದರಿಂದ ಬಿಕರಿ ಮಾಡಿ ಬಂದ ಹಣವೂ ಅಧಿಕ. ಸರಕಾರದ ಸಂಗ್ರಹಣ ಕಾರ್ಯ ಚುರುಕಾಗಿರುವುದರಿಂದ ಬೇಡಿಕೆಗೇನೂ ಕೊರತೆಯಿಲ್ಲ. ಹಣ ಹೆಚ್ಚಾದ್ದರಿಂದ ಇತರ ಸರಕುಗಳಿಗೆ ಬೇಡಿಕೆ. ಬೆಲೆಗಳಿಗೆ ಪ್ರಚೋದನೆ. ವೆಚ್ಚದ ಮೇಲೆ ಹೆಚ್ಚು ಒತ್ತಡ ಬೀಳುತ್ತಿರುವುದರಿಂದಾಗಿ ಉಬ್ಬರಕ್ಕೊಳಗಾದ ಕೈಗಾರಿಕೆಗಳು ಉತ್ಪಾದನೆ ಹೆಚ್ಚಿಸಲಾರವಾಗಿವೆ. ಅಲ್ಲದೆ ಇದು ಆರನೆಯ ಯೋಜನೆಯ ಕೊನೆಯ ವರ್ಷ. ಯೋಜನೆಯಲ್ಲಿ ಇಟ್ಟುಕೊಳ್ಳಲಾದ ಗುರಿಗಳನ್ನು ನಿಲುಕಲು ಹೆಣಗಾಟ. ವೆಚ್ಚ ಏರುತ್ತಿದೆ. ಇದಕ್ಕೆಲ್ಲ ಹಣದ ಬಿಡುಗಡೆ. ಜೊತೆಗೆ ದೇಶ ಇನ್ನೊಂದು ಚುನಾವಣೆಯ ಪ್ರತೀಕ್ಷೆಯಲ್ಲಿದೆ. ಈ ಸಮಯದಲ್ಲಿ ಸರಕಾರ ಬಿಗಿನೀತಿ ಅನುಸರಿಸಲಾರದು. ಸಮಾಜ ಕಲ್ಯಾಣ ಕಾರ್ಯಗಳ ವಿಚಾರದಲ್ಲಾಗಲಿ, ವೇತನ ಭತ್ಯಗಳ ಏರಿಕೆಯ ವಿಚಾರದಲ್ಲಾಗಲಿ ಜಿಪುಣತನ ತೋರಿಸಲಾರದು. ಜನಮನ ಗೆಲ್ಲಲು ನಾನಾ ಕಾರ್ಯಕ್ರಮ ಹಮ್ಮಿಕೊಂಡು ಹಣ ಹರಿಯ ಬಿಡುವ ಪ್ರವೃತ್ತಿ. ಸಂಯಮದ ಮಾತಿಗಿದು ಸಕಾಲವಲ್ಲ. ಇದು ಕೂಡ ಹಣದ ಅತಿ ಪ್ರಸರಣಕ್ಕೆ ಕಾರಣವಾಗಿದೆ. ಅಧಿಕ ದ್ರವತ್ವ. ಇಂಥ ಪರಿಸ್ಥಿತಿಯಲ್ಲಿ ಬ್ಯಾಂಕುಗಳು ಹೊರಗುಳಿಯುವಂತಿಲ್ಲ. ಅದಕ್ಕೂ ಹಣ ಹರಿದು ಬರುತ್ತಿದೆ. ಠೇವಣಿಗಳು ಏರುತ್ತಿವೆ. ಈ ವರ್ಷವೂ ಕಳೆದ ವರ್ಷದಷ್ಟೇ

ಠೇವಣಿಗಳು ಏರುವ ನಿರೀಕ್ಷೆ. ಈಗಾಗಲೇ ಠೇವಣಿಗಳ ಹೆಚ್ಚಳ ಸುಮಾರು ಐದು ಸಾವಿರ ಕೋಟಿ ರೂಪಾಯಿಗಳ ಗಡಿ ಮುಟ್ಟಿದೆ. ಠೇವಣಿಗಳ ಏರಿಕೆಗೆ ಅನುಗುಣವಾಗಿ ಉತ್ಪಾದಕ ಚಟುವಟಿಕೆಗಳಿಗೆ ಉದರಿ ನೀಡುವ ಅವಕಾಶಗಳು ಬೆಳೆದಿಲ್ಲ. ಈ ಹಣಕಾಸು ವರ್ಷದ ಮೊದಲ ಅರ್ಧದಲ್ಲಿ—ಸೆಪ್ಟೆಂಬರ್ ಅಂತ್ಯದ ವರೆಗೆ—ಆಹಾರೇತರ ಉದರಿ ರೂ. 1,700 ಕೋಟಿಯಷ್ಟು ವಿಸ್ತರಿಸಬೇಕು ಎಂಬುದಾಗಿ ರಿಸರ್ವ್ ಬ್ಯಾಂಕ್ ಅಷ್ಟಕ್ಕೆ ಅಣಿಮಾಡಿತ್ತು. ಆದರೆ ಅದರಲ್ಲಿ ಅರ್ಧದಷ್ಟು ಸಾಧಿಸುವಂತಿದೆ. ಕೈಗಾರಿಕಾ ಚಟುವಟಿಕೆ ಸಾಕಷ್ಟು ಚೇತರಿಸಿಕೊಂಡಿದೆಯೆನ್ನ ಲಾದರೂ ಏಕೆ ಹೀಗೆ ಎಂಬುದು ಒಂದು ಪ್ರಶ್ನೆ. ಒಟ್ಟು ಉದರಿ ವಿಸ್ತರಣೆಯಲ್ಲಿ ಶೇ. 40 ರಷ್ಟು ಭಾಗವನ್ನು ದೊಡ್ಡ ಕೈಗಾರಿಕೆಗಳು ಪಡೆಯುತ್ತಿದ್ದುವು. ಆದರೆ ಅವು ಸಾರ್ವಜನಿಕರಿಂದ ನೇರವಾಗಿ ಹಾಗೂ ಬ್ಯಾಂಕೇತರ ಮೂಲಗಳಿಂದ ತಮಗೆ ಬೇಕಾದ ನಿಧಿಗಳನ್ನು ಪಡೆಯುತ್ತಿರು ವುದರಿಂದ ಈ ಪರಿಸ್ಥಿತಿ. ಭಾರತೀಯ ಸ್ಟೇಟ್ ಬ್ಯಾಂಕಿನ ಹೆಚ್ಚುವರಿ ನಿಧಿ ಅತ್ಯಧಿಕ. ತೈಲಕ್ಷೇತ್ರ ದಿಂದ ಉದರಿ ಬೇಡಿಕೆ ಕಡಿಮೆಯಾಗಿರುವುದು ಇದಕ್ಕೆ ಕಾರಣವೆನ್ನಲಾಗಿದೆ. ಉಳಿದ ಪ್ರಮುಖ ಬ್ಯಾಂಕುಗಳಿಗೆ ಸಮಸ್ಯೆ ಇಷ್ಟು ತೀವ್ರವಾಗಿಲ್ಲ. ದಕ್ಷಿಣದಲ್ಲಿ ಸ್ಥಾಪಿತವಾದ ಹಲವು ಬ್ಯಾಂಕುಗಳಿಗೆ ಹಣ ಸಂಪನ್ಮೂಲದ ಕೊರತೆ ಕಂಡುಬರುತ್ತಿದೆ. ಒಟ್ಟು ಬ್ಯಾಂಕಿಂಗ್ ವಲಯವನ್ನು ತೆಗೆದು ಕೊಂಡಾಗ ಠೇವಣಿ ವಿಸ್ತರಣೆಯ ಪ್ರಮಾಣದಲ್ಲೇ ಉದರಿ ವಿಸ್ತರಣೆಯಾಗುತ್ತಿಲ್ಲವೆಂದು ಹೇಳಲಾಗಿದೆ. ಹೆಚ್ಚಿನ ದ್ರವತ್ವ ಸ್ಥಿತಿಯಿದ್ದಾಗ ಲಾಭದ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗಬಾರದೆಂಬ ಕಳವಳದಿಂದ ಬ್ಯಾಂಕುಗಳು ತಮ್ಮ ಸಂಪನ್ಮೂಲಗಳನ್ನು ಚೆಲ್ಲಾಡಬಹುದು. ಇದರಿಂದ ಬೆಲೆ ಏರಿಕೆ ಹಾಗೂ ಅಸ್ಥಿರ ಪ್ರವೃತ್ತಿಗಳಿಗೆ ಪ್ರಚೋದನೆ ದೊರಕಿದಂತಾಗುತ್ತದೆ. ನ್ಯಾಯಬದ್ಧವಾದ ಬೇಡಿಕೆಗಳ ಪೂರೈಕೆಗೆ ಚ್ಯುತಿಯುಂಟಾಗದ ರೀತಿಯಲ್ಲಿ, ಆದರೆ ಸಿಕ್ಕಾಬಟ್ಟೆ ಉದರಿ ವಿಸ್ತರಣೆಯಾಗದಂತೆ ಕಟ್ಟುಪಾಡುಗಳನ್ನು ವಿಧಿಸುವುದೂ, ನಿಯಂತ್ರಣ ಕ್ರಮ ಕೈಗೊಳ್ಳುವುದೂ ರಿಸರ್ವ್ ಬ್ಯಾಂಕಿನ ಹೊಣೆ.

### ಕಠಿಣತಮ ಕಜ್ಜ

ಒಂದು ಕಡೆ ಸರಕಾರದ ಹಣಕಾಸು ನೀತಿಯಿಂದ ಅಧಿಕಾಧಿಕ ಧನೋತ್ಪತ್ತಿಯಾಗುತ್ತಿರುವಾಗ, ಆರ್ಥಿಕ ಪ್ರವೃತ್ತಿಗಳು ಅಪಾಯಕಾರಿಯಾಗಿರುವಾಗ, ವಿದೇಶಿ ವ್ಯಾಪಾರ ಪರಿಸ್ಥಿತಿ ಪ್ರತಿಕೂಲ ಕರವಾದ್ದಾಗಿರುವಾಗ, ಇದಕ್ಕೆ ವಿರುದ್ಧವಾದ ದಿಕ್ಕಿನಲ್ಲಿ ಹಣ-ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಿಯಂತ್ರಣ ವಿಧಿವಿಧಾನಗಳನ್ನು ರೂಪಿಸಿ ಜಾರಿಗೆ ತರುವ ಪ್ರಯತ್ನ ಮಾಡುತ್ತಿರುವ ರಿಸರ್ವ್ ಬ್ಯಾಂಕಿನ ಕಜ್ಜ ಕಠಿಣತಮವಾದ್ದು. ಇದು ನಿಜಕ್ಕೂ ಅಸೂಯೆ ತರುವಂಥದಲ್ಲ, ಕನಿಕರ ಹುಟ್ಟಿಸು ವಂಥದು. ಆದಾಗ್ಯೂ ಛಲವನ್ನು ಬಿಡದ ತ್ರಿವಿಕ್ರಮನಂತೆ ರಿಸರ್ವ್ ಬ್ಯಾಂಕ್ ಪ್ರಯತ್ನ ನಡಸುತ್ತಲೇ ಇದೆ. ಕಳೆದ ಹಲವಾರು ತಿಂಗಳುಗಳಿಂದಲೇ ಈ ನಿಟ್ಟಿನಲ್ಲಿ ಅದರ ಪ್ರಯತ್ನ. ಅದರ ಕೈಗೆ ಸುಲಭವಾಗಿ ಒದಗಿ ಬರುವ ಎರಡು ಅಸ್ತ್ರಗಳೆಂದರೆ ನಗದು ಮೀಸಲು ಅನುಪಾತ ಹಾಗೂ ದ್ರವತ್ವ ಅನುಪಾತ. ಬ್ಯಾಂಕು ದರ, ಮುಕ್ತಪೇಟೆ ವಹಿವಾಟು, ಉದರಿಯ ಅಂಚಿನ ಅಪೇಕ್ಷಿತಗಳ ವಿಸ್ತರಣೆ ಮುಂತಾದ ಪರಂಪರಾಗತ ಅಸ್ತ್ರಗಳು ಭಾರತದಂಥ ದೇಶದಲ್ಲಿ ಮೊಂಡು. ಏಕೆಂದರೆ ಬ್ಯಾಂಕಿಂಗ್ ಕ್ಷೇತ್ರದಿಂದ ಹೊರಗೆ ಹಣ ವಹಿವಾಟು ಅಪಾರ. ಗುಪ್ತಗಾಮಿನಿಯಾದ ಸಮಾಂತರ ಆರ್ಥಿಕ ಚಟುವಟಿಕೆಗಳೂ ಅಗಾಧ. ಕಣ್ಣಿಗೆ ಗೋಚರವಾಗುವ ವ್ಯಾಪಾರ ಚೋಟುದ್ದ ವಾದರೆ, ಒಳಗೊಳಗೇ ನಡೆಯುವುದು ಮಾರುದ್ದ. ಇಷ್ಟೆಲ್ಲಾ ನಿರ್ಬಂಧಗಳಿಗೆ ಒಳಪಟ್ಟೂ ರಿಸರ್ವ್ ಬ್ಯಾಂಕು ಆರ್ಥಿಕಸಮುದ್ರರಾಜನ ಮೇಲೆ ತನ್ನ ರಾಮಬಾಣವನ್ನು ಪ್ರಯೋಗಿಸಬೇಕಾಗಿದೆ. ಬ್ಯಾಂಕುಗಳು ಕಡ್ಡಾಯವಾಗಿ ರಿಸರ್ವ್ ಬ್ಯಾಂಕಿನಲ್ಲಿ ಇಡಬೇಕಾದ ನಗದು ಮೀಸಲು ಅನುಪಾತ ವನ್ನು ಕ್ರಮಕ್ರಮವಾಗಿ ಶೇಕಡ ಅರ್ಧಾರ್ಧದಂತೆ ಏರಿಸುತ್ತ ಬರುತ್ತಿದೆ. ಈ ವರ್ಷದ ಆದಿಭಾಗ

ದಲ್ಲಿ ಇದು ಒಟ್ಟು ಠೇವಣಿಗಳ ಶೇ. 9ರಷ್ಟಕ್ಕೆ ಏರಿತ್ತು. ಇಷ್ಟು ಹಣವನ್ನು ಬ್ಯಾಂಕುಗಳು ಕಡ್ಡಾಯವಾಗಿ ಇಡಬೇಕಾಗಿ ಬಂದದ್ದರಿಂದ ಬ್ಯಾಂಕುಗಳ ಉದರಿ ಸೃಷ್ಟಿಯ ಸಾಮರ್ಥ್ಯ ಇದಕ್ಕನುಗುಣವಾಗಿ ಮೊಟಕಾಗುವುದೆಂದು ನಿರೀಕ್ಷೆ. ಹೆಚ್ಚುವರಿ ನಿಧಿಗಳ ಕೆಸರು ಆಚೀಚೆ ಎರಚಾಡದಂತೆ ಈ ತರದೂದು. ಇದು ಸಾಲದೆಂಬಂತೆ ರಿಸರ್ವ್ ಬ್ಯಾಂಕು ಒಂದು ಗೊತ್ತಾದ ದಿನದಿಂದ ಈಚೆಗಿನ ಠೇವಣಿ ಹೆಚ್ಚಳದಲ್ಲಿ ಶೇ. 10ರಷ್ಟನ್ನೂ ತೆಗೆದಿಡಬೇಕೆಂದು ವಿಧಿಸಿದೆ. ಒಟ್ಟಿನಲ್ಲಿ ಅಧಿಕ ಠೇವಣಿಯ ಸುಮಾರು ಶೇ. 19ರಷ್ಟು ಹಣ ಉದರಿ ವಿಸ್ತರಣೆಗೆ ಇಲ್ಲವಾದಂತಾಗಿದೆ.

ಜೊತೆಗೆ, ನಗದಾಗಿ ಸುಲಭವಾಗಿ ಪರಿವರ್ತಿಸಬಹುದಾದ ಗಟ್ಟಿ ಪ್ರತಿಭೂತಿ ಪತ್ರಗಳೇ ಮುಂತಾದವುಗಳಲ್ಲಿ ಹೂಡಬೇಕಾದ ವಿನಿಯೋಜನೆಯ ಅನುಪಾತವನ್ನೂ ಅದು ಈಚೆಗೆ ಹೆಚ್ಚಿಸಿದೆ. ಪರಿನಿಯತ ದ್ರವತ್ವ ಅನುಪಾತವೆಂದು ಇದಕ್ಕೆ ಗಂಭೀರವಾದ ಹೆಸರು. ಕಳೆದ ಜುಲೈ 28ರಂದು ಈ ಅನುಪಾತವನ್ನು ಶೇ. 35ರಿಂದ ಶೇ. 35.5ಕ್ಕೆ ಏರಿಸಲಾಯಿತು. ಸೆಪ್ಟೆಂಬರ್ 1ರಿಂದ ಇದು ಶೇ. 36ಕ್ಕೆ ಹೆಚ್ಚಿತು. ಇದರಿಂದಲೂ ಇಷ್ಟಕಾರಕವಲ್ಲದ ಕ್ಷೇತ್ರಗಳಲ್ಲಿ ಉದರಿಯ ನುಗ್ಗಾಟಕ್ಕೆ ತಡೆ ಒಡ್ಡಿದಂತಾಗಿದೆ. ಅಷ್ಟರಮಟ್ಟಿಗೆ ಹಣದುಬ್ಬರ ಪ್ರವೃತ್ತಿಗೆ ನಿರುತ್ತೇಜನ.

ಜೊತೆಗೆ ಈ ಹಿಂದೆ ಅಧಿಕ ಠೇವಣಿಗಳ ಮೇಲೆ ಕಡ್ಡಾಯವಾಗಿ ಇಡಬೇಕೆಂದು ವಿಧಿಸಲಾಗಿದ್ದ ನಗದು ಹಣವನ್ನು ರಿಸರ್ವ್ ಬ್ಯಾಂಕ್ ಬಿಡುಗಡೆ ಮಾಡುವುದನ್ನೂ ಮುಂದಕ್ಕೆ ಹಾಕಿದೆ. ಅಲ್ಲದೆ ಆಹಾರದ ಮೇಲೆ ನೀಡುವ ಮುಂಗಡದ ಹಣದ ಪೂರೈಕೆಯ ಸೌಲಭ್ಯಗಳನ್ನೂ ಸಂಕುಚಿತಗೊಳಿಸಲಾಗಿದೆ. ಇವೆಲ್ಲ ಕ್ರಮಗಳಿಂದ ಹಣದುಬ್ಬರ ಪ್ರವೃತ್ತಿಗೆ ತಡೆ ಉಂಟಾಗುವುದಾದರೆ ಸಂತೋಷವೇ.

## ಉಭಯ ಸಂಕಟ

ಆದರೆ ಆದೀತೆ? ಮೊದಲೇ ಹೇಳಿದ ಹಾಗೆ, ಒಡಕು ಪಾತ್ರೆಯಿಂದ ಹಲವೆಡೆ ನೀರು ಸೋರುತ್ತಿರುವಾಗ ಅದರ ಬಾಯಿಯನ್ನು ಮಾತ್ರ ಗಿಡಿಯುವುದರಿಂದ ಪರಿಸ್ಥಿತಿ ಹೆಚ್ಚು ಸುಧಾರಿಸದು. ಬ್ಯಾಂಕುಗಳು ಮುಂಬರುವ ತೀವ್ರ ಆರ್ಥಿಕ ಚಟುವಟಿಕೆಯ ಕಾಲದಲ್ಲಿ ಹಣದ ಕೊರತೆಯಿಂದ ಮಿಸುಕಾಡಬೇಕಾದೀತಲ್ಲವೆ ಎಂಬುದು ಒಂದು ಅಂಜಿಕೆ. ಕೇಂದ್ರ ರಾಜ್ಯ ಸರಕಾರಗಳು ನೀಡುವ ಸಾಲಪತ್ರಗಳಲ್ಲಿ ಅವು ಅಗಾಧ ಹಣ ತೊಡಗಿಸಬೇಕು. ಮುಂದಿನ ಮಾರ್ಚ್ ಕೊನೆಯ ವೇಳೆಗೆ ಬ್ಯಾಂಕುಗಳು ತಮ್ಮ ಒಟ್ಟು ಮುಂಗಡಗಳಲ್ಲಿ ಶೇಕಡ 40ರಷ್ಟು ಹಣವನ್ನು ಆದ್ಯತಾವಲಯಗಳಿಗೆ ನೀಡಬೇಕು. ಇದಕ್ಕಾಗಿಯೂ ಬ್ಯಾಂಕುಗಳಿಗೆ ಹೆಚ್ಚು ಹಣ ಬೇಕು.

ಅಲ್ಲದೆ ಬ್ಯಾಂಕುಗಳ ಲಾಭಪ್ರದತೆಯದು ಒಂದು ಮುಖ್ಯ ಪ್ರಶ್ನೆ. ಹೇಳಿ ಕೇಳಿ ನಮ್ಮ ಬ್ಯಾಂಕುಗಳು ಲಾಭ-ನಷ್ಟಗಳ ಚೌಕಟ್ಟಿನಲ್ಲೇ ಕೆಲಸ ಮಾಡಬೇಕಾಗಿದೆ. ಸದ್ಯಕ್ಕಂತೂ ಇದೇ ದಕ್ಷತೆಯ ಖಚಿತ ನಿಕಷ. ಬ್ಯಾಂಕುಗಳು ನಷ್ಟಪ್ರದವಾದರೆ ಸಮಾಜ ತೆರಬೇಕಾದ ಬೆಲೆ ವಿಪರೀತ. ಹುಚ್ಚು ಕುದುರೆಯಂತೆ ನೆಗೆಯುತ್ತಿರುವ ಬೆಲೆಗಳು ಆಗ ಎಲ್ಲ ಕಟ್ಟುಗಳನ್ನೂ ಸಂಪೂರ್ಣ ಕಿತ್ತುಕೊಂಡುಬಿಡುತ್ತವೆ. ನಮ್ಮ ಬ್ಯಾಂಕುಗಳ ಠೇವಣಿ ವಿಸ್ತರಣೆಯತ್ತ ಕಣ್ಣು ಹಾಯಿಸಿದಾಗ ಅವುಗಳ ಲಾಭಪ್ರದತೆಯ ಸಾಧ್ಯಾಸಾಧ್ಯತೆಗಳ ಸುಳಿವು ನಮಗೆ ದೊರಕೀತು. ಬ್ಯಾಂಕುಗಳ ಠೇವಣಿ ಬೆಳವಣಿಗೆಯಲ್ಲಿ ಅವಧಿ ಠೇವಣಿಗಳೇ ಪ್ರಧಾನವಾಗುತ್ತಿವೆ. ಬ್ಯಾಂಕು ನಿಧಿಗಳ ಸೀಮಾಂತ ಬಡ್ಡಿ ವೆಚ್ಚ ಸುಮಾರು ಶೇ. 10ರಷ್ಟಾಗುತ್ತದೆ. ಸುಮಾರು ಶೇ. 45ರಷ್ಟು ಠೇವಣಿ ಹಣವನ್ನು ಶಾಸನ ವಿಧಿಸಿದ ನಗದು ಮೀಸಲು ಹಾಗೂ ದ್ರವತ್ವ ಪಾಲನೆಗಾಗಿ ತೆಗೆದಿಡಬೇಕಾಗುತ್ತದೆ. ಬ್ಯಾಂಕುಗಳು ಶೇ. 15ರಷ್ಟಾದರೂ ಲಾಭ ಸಂಪಾದನೆ ಮಾಡದಿದ್ದರೆ ಎಣ್ಣೆಗೂ ಬತ್ತಿಗೂ

*

ನೇರವಾಗುವುದಿಲ್ಲ. ಆದ್ದರಿಂದ ಬ್ಯಾಂಕುಗಳು ನಿಜಕ್ಕೂ ಈಗ ಉಭಯಸಂಕಟದ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದೀತು.

## ಬ್ಯಾಂಕ್ ವೇತನ ಉತ್ಕರ್ಷ

ನಾವು ಅಚ್ಚಿನ ಮನೆಗೆ ಹೋಗುತ್ತಿರುವಾಗ ಬ್ಯಾಂಕ್ ನೌಕರರನ್ನು ಕುರಿತಂತೆ ಒಂದು ಸ್ವಾಗತಾರ್ಹ ಸುದ್ದಿ ಬಂದಿದೆ. ನೌಕರರ ದೃಷ್ಟಿಯಿಂದಂತೂ ಇದು ಸ್ವಾಗತಾರ್ಹವೇ. ಸಮಾಜದ ಯಾವುದೇ ಒಂದು ವರ್ಗಕ್ಕೆ ಆರ್ಥಿಕವಾಗಿ ಅನುಕೂಲವಾಗುವುದಾದರೆ ಅದನ್ನು ಯಾರಾದರೂ ಸ್ವಾಗತಿಸಿಯಾರು. ಉದ್ಯೋಗಿಗಳ ನಾನಾ ವಲಯಗಳಲ್ಲಿ ವೇತನಗಳ ಉತ್ಕರ್ಷವಾಗುತ್ತಿರುವಾಗ ಬ್ಯಾಂಕ್ ಉದ್ಯೋಗಿಗಳಾದರೂ ಅದನ್ನು ಬಯಸುವುದು ಸಹಜವೇ. ಸರ್ಕಾರಿ ವಲಯದ ಇತರ ಉದ್ಯಮಗಳಾದ ಕಲ್ಲಿದ್ದಲು, ಉಕ್ಕು ಮುಂತಾದವುಗಳ ಉದ್ಯೋಗಿಗಳಿಗೆ ವೇತನಗಳು ಈಗಾಗಲೇ ಏರಿವೆ. ಈಗ ಬ್ಯಾಂಕ್ ಉದ್ಯೋಗಿಗಳ ಸರದಿ. ವೇತನ ಕುರಿತ ಹಳೆಯ ಒಪ್ಪಂದದ ಅವಧಿ ಮುಗಿದು ಹೊಸದರ ಆಗಮನವನ್ನು ಬಹುಕಾಲದಿಂದಲೇ ನಿರೀಕ್ಷಿಸಲಾಗಿತ್ತು. 1983ರ ಜುಲೈ ತಿಂಗಳಿಂದ ಜಾರಿಗೆ ಬರುವ ಹೊಸ ಒಪ್ಪಂದದ ಪ್ರಕಾರ ದೇಶದ 55 'ಎ' ವರ್ಗದ ಬ್ಯಾಂಕ್ ಉದ್ಯೋಗಿಗಳಿಗೆ ಕನಿಷ್ಠ ರೂ. 60ರಿಂದ ಗರಿಷ್ಠ ರೂ. 293ರ ವರೆಗೆ ಮಾಸಿಕ ವೇತನದಲ್ಲಿ ಏರಿಕೆಯಾಗುತ್ತದೆ. ಹತ್ತುಸಾವಿರಕ್ಕಿಂತ ಕಡಿಮೆ ಜನಸಂಖ್ಯೆಯ ಗ್ರಾಮೀಣ ಪಟ್ಟಣಗಳಲ್ಲಿಯ ಶಾಖೆಗಳಲ್ಲಿ ಕೆಲಸ ಮಾಡುವವರಿಗೆ ಮೂಲ ವೇತನದ ಶೇ. 6ರಷ್ಟು, ರೂ. 100ರ ಗರಿಷ್ಠ ಮಿತಿಗೆ ಒಳಪಟ್ಟು, ಮನೆ ಬಾಡಿಗೆ ಭತ್ಯ ದೊರಕುತ್ತದೆ. ನಗರವಾಸಿ ಉದ್ಯೋಗಿಗಳಿಗೂ—ಗುಮಾಸ್ತರಿಗೆ ಅವರ ಮೂಲ ವೇತನದ ಶೇ. 10ರಷ್ಟು ಹಾಗೂ ಉಪ-ಸಿಬ್ಬಂದಿಯವರಿಗೆ ಅವರ ಮೂಲ ವೇತನದ ಶೇ. 8ರಷ್ಟು—ಅನುಕ್ರಮವಾಗಿ ರೂ. 140 ಮತ್ತು ರೂ. 60ರ ಗರಿಷ್ಠ ಮಿತಿಗಳಿಗೆ ಒಳಪಟ್ಟು—ನಗರ ಪರಿಹಾರ ಭತ್ಯ ಪ್ರಾಪ್ತವಾಗುತ್ತದೆ. ಅಖಿಲ ಭಾರತ ಬ್ಯಾಂಕ್ ಉದ್ಯೋಗಿಗಳ ಸಂಘ ಮತ್ತು ಬ್ಯಾಂಕ್ ಉದ್ಯೋಗಿಗಳ ರಾಷ್ಟ್ರೀಯ ಮಹಾಸಂಘಗಳಿಗೂ ಭಾರತದ ಬ್ಯಾಂಕುಗಳ ಸಂಘಕ್ಕೂ ಒಪ್ಪಂದವಾಗಿದೆ. ಭಾರತೀಯ ಸ್ಟೇಟ್ ಬ್ಯಾಂಕ್ ಉದ್ಯೋಗಿಗಳು ಪ್ರತ್ಯೇಕ ಒಪ್ಪಂದದ ಮೂಲಕ ಹೆಚ್ಚಿನ ಸವಲತ್ತು ಪಡೆದಿದ್ದಾರೆ.

## ವಾದ-ಪ್ರತಿವಾದ

ಹೊಸ ಒಪ್ಪಂದದಿಂದ ಒಟ್ಟಿನಲ್ಲಿ ರೂ. 130 ಕೋಟಿಯ ಭಾರ ಬೀಳುತ್ತದೆ. ವೇತನದ ಮೊಬಲಗು ಶೇ. 14.5ರಷ್ಟು ಅಧಿಕವಾಗುತ್ತದೆ. ಇದರಿಂದ ಉದ್ಯೋಗಿಗಳಿಗೆ ನೆಮ್ಮದಿ ದೊರಕಿ ಅವರ ಕಾರ್ಯ ಹೆಚ್ಚು ದಕ್ಷವಾಗುವುದಾದರೆ ಸಂತೋಷ. ಕಳೆದ ಹಲವು ವರ್ಷಗಳಲ್ಲಿ ಬ್ಯಾಂಕುಗಳ ಲಾಭಪ್ರದತೆ ಬಹಳಷ್ಟು ಮುಕ್ಕಾಗಿ ಹೋಗಿದೆಯೆಂಬುದು ನಿಜ. ಉದ್ಯೋಗಿಗಳಿಗೆ ಹೆಚ್ಚು ಸಂಬಳ ಮತ್ತು ಭತ್ಯ ನೀಡುವುದರಿಂದ ಇದರ ಮೇಲೆ ಇನ್ನಷ್ಟು ದುಷ್ಪರಿಣಾಮವಾಗುವುದೆಂದು ವಾದಿಸಬಹುದು. ಆದರೆ ನ್ಯಾಯವಾಗಿ ಸಲ್ಲಬೇಕಾದುದನ್ನು ತಡೆಹಿಡಿಯುವುದೂ ಸರಿಯಲ್ಲವೆಂದು ಇದಕ್ಕೆ ಉತ್ತರ ಹೇಳಬಹುದು. ಬ್ಯಾಂಕ್ ಉದ್ಯೋಗಿಗಳ ಉತ್ಪಾದಕತೆ ಹಾಗೂ ಗ್ರಾಹಕ ಸೇವೆಗೂ ವೇತನ ಏರಿಕೆಗೂ ಲಗತ್ತು ಮಾಡದಿರುವುದು ಸ್ವಾಗತಾರ್ಹವೆಂದು ಕೆಲವರೂ ದುರದೃಷ್ಟಕರವೆಂದು ಇನ್ನು ಕೆಲವರೂ ವಾದಿಸಬಹುದು. ವೇತನ, ಭತ್ಯ ಹಾಗೂ ಪರಿಲಬ್ಧಿಗಳ ವಿಸ್ತರಣಕ್ಕೆ ವಿಲೋಮಾನುಪಾತವಾಗಿ ಉತ್ಪಾದಕತೆ ಮತ್ತು ಗ್ರಾಹಕ ಸೇವೆಗಳು ಚಲಿಸುತ್ತಿವೆಯೆಂದು ವಾದಿಸಲು ನಾನಾ ನಿದರ್ಶನಗಳನ್ನು ಕೊಡಬಹುದು. ಗಂಟೆ-ತಾರೀಕು ಪಟ್ಟಿಗಳನ್ನೇ ನಿಟ್ಟಿಸುತ್ತ ಕೆಲಸ ಮಾಡುವ ಪ್ರವೃತ್ತಿ ಬೆಳೆಯುತ್ತಿದೆಯೆನ್ನಬಹುದು. ಆದರೆ ತೃಪ್ತ ಉದ್ಯೋಗಿಯೇ ದಕ್ಷತೆಯ ಮೂಲ ಎಂಬುದನ್ನು ಮರೆಯುವಂತೆಯೂ ಇಲ್ಲ.

## ಬ್ಯಾಂಕಿಂಗ್ : ಹೊಸ ಕ್ಷಿತಿಜ

ಈ ವಾದಗಳೇನೇ ಇರಲಿ. ಬ್ಯಾಂಕಿನ ದಕ್ಷತೆಯನ್ನು ಸರ್ವತೋಮುಖವಾಗಿ ಬೆಳಸುವ, ಗ್ರಾಹಕತೃಪ್ತಿಯನ್ನು ವರ್ಧನಗೊಳಿಸುವ ಹೊಣೆ ಆಡಳಿತ ಹಾಗೂ ಉದ್ಯೋಗಿ ವರ್ಗಗಳೆರಡಕ್ಕೂ ಸೇರಿದ್ದೆಂಬುದರಲ್ಲಿ ಎರಡು ಮಾತಿಲ್ಲ. ಬ್ಯಾಂಕ್ ಉದ್ಯಮ ಇಂದು ಹೆಚ್ಚು ಹೆಚ್ಚು ಸಂಕೀರ್ಣವಾದ್ದೂ ನಾಜೂಕಾದ್ದೂ ಆಗುತ್ತಿದೆ. ಬ್ಯಾಂಕಿನ ಚಟುವಟಿಕೆಗಳು ವಿಸ್ತರಿಸುತ್ತಿವೆ. ಶೀಘ್ರವಾಗಿ ಬದಲಾಗುತ್ತಿರುವ ಕೈಗಾರಿಕೆ-ವಾಣಿಜ್ಯಗಳ ಅಗತ್ಯಗಳಿಗೆ ಅಷ್ಟೇ ಶೀಘ್ರವಾಗಿ ಹೊಂದಿಕೊಳ್ಳುವುದು ಬ್ಯಾಂಕಿಂಗಿನ ಕರ್ತವ್ಯ. ಕ್ರಾಂತಿಪರ ದೃಷ್ಟಿ ಇದಕ್ಕೆ ಅಗತ್ಯ. ಇನ್ನು ಹತ್ತು ವರ್ಷಗಳ ಅನಂತರದ ಅಗತ್ಯಗಳನ್ನೂ ಬೆಳವಣಿಗೆಗಳನ್ನೂ ಇಂದೇ ಊಹಿಸಿ ಅವಕ್ಕೆ ಈಗಲೇ ಅನುವು ಮಾಡಿಕೊಳ್ಳುವುದು ಅಗತ್ಯ. ಭಾರತದಲ್ಲಿ ಹಲವಾರು ಸಾಮಾಜಿಕ ಹೊಣೆಗಳನ್ನು ಹೊರಬೇಕಾಗಿರುವ ಬ್ಯಾಂಕಿಂಗ್ ವಲಯ ಇನ್ನೂ ಹೆಚ್ಚು ಚಚ್ಚರದಿಂದ ಕಾರ್ಯಪ್ರವೃತ್ತವಾಗಬೇಕಾಗಿದೆ. ಜೊತೆಜೊತೆಗೇ ಬ್ಯಾಂಕಿನ ಉತ್ಪಾದಕತೆಯನ್ನು—ಅದರ ಅರ್ಥ ಏನೇ ಇರಲಿ—ಹೆಚ್ಚಿಸುವತ್ತ ಗಮನ ಹರಿಸಬೇಕು. ಮನೆವಾರ್ತೆ ಹೆಚ್ಚು ದಕ್ಷವಾಗುವುದರ ಜೊತೆಗೇ ನಿಧಿಗಳ ನಿರ್ವಹಣೆಯ ಹೊಸ ಹೊಸ ದಿಕ್ಕುಗಳನ್ನು ಗುರುತಿಸಿ ರೂಢಿಸಬೇಕು, ಸಿಬ್ಬಂದಿಯ ಅನುಕೂಲತಮ ನಿರ್ವಹಣೆ ಸಾಧ್ಯವಾಗಬೇಕು, ಬ್ಯಾಂಕುಗಳ ಖರ್ಚುಗಳ ಮೇಲೆ ನಿಯಂತ್ರಣವಿರಬೇಕು, ಮಾಹಿತಿ ವ್ಯವಸ್ಥೆ ಅತ್ಯಂತ ಸಲೀಸಾಗಿರಬೇಕು, ತಿರೋಗಾಮಿ ವಿಧಾನಗಳ ಜಾಗದಲ್ಲಿ ಹೊಸ ಹೊಸ ಕಾರ್ಯತಂತ್ರಗಳು ರೂಪುಗೊಳ್ಳಬೇಕು. ಒಟ್ಟಿನಲ್ಲಿ ಮುಂದಿನ ದಶಕದಲ್ಲಿ ಬ್ಯಾಂಕು ಹೇಗೆ ಇರಬೇಕು, ಏನು ಮಾಡಬೇಕು, ಹೇಗೆ ಮಾಡಬೇಕು—ಎಂಬ ಬಗೆಗೆ ಆತ್ಮಪರೀಕ್ಷಣವಾಗಲಿ, ವಿಚಾರಮಥನವಾಗಲಿ, ಮಾರ್ಗೋಪಾಯಗಳು ರೂಪುಗೊಳ್ಳುವಂತಾಗಲಿ. 'ಬ್ಯಾಂಕಿಂಗ್: ಹೊಸ ಕ್ಷಿತಿಜ'—ಇದು ನಮ್ಮ ಕಾರ್ಯಶೀಲ ಘೋಷವಾಕ್ಯವಾಗಲಿ.

# ಬ್ಯಾಂಕು ವ್ಯವಹಾರದಲ್ಲಿ ಕನ್ನಡ*

ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್

ಕರ್ನಾಟಕ ರಾಜ್ಯದಲ್ಲಿರುವ ಎಲ್ಲ ಬ್ಯಾಂಕು ಕಛೇರಿಗಳೂ ತಮ್ಮ ವ್ಯವಹಾರವನ್ನು ಕನ್ನಡದಲ್ಲಿ ನಡಸಬೇಕೆಂಬ ಬಗ್ಗೆ ತಾತ್ತ್ವಿಕವಾಗಿ ಯಾವ ಭಿನ್ನಾಭಿಪ್ರಾಯವೂ ಇರಲಾರದು. ಆದರೆ ಕನ್ನಡದಲ್ಲೇ ನಡಸಬೇಕೆ, ಅಥವಾ ಕನ್ನಡದಲ್ಲೂ ನಡಸಬಹುದೆ ಎಂಬುದು ಪ್ರಶ್ನೆ. ಕನ್ನಡವನ್ನು ಎಷ್ಟರ ಮಟ್ಟಿಗೆ ಅಥವಾ ಯಾವ ಹಂತದವರೆಗೆ ಬಳಸಬೇಕೆಂಬುದು ಈಗ ವಾದಗ್ರಸ್ತವಾಗಿರುವ ವಿಚಾರ.

ಈ ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ಕಂಡುಕೊಳ್ಳಬೇಕಾದರೆ ಎರಡು ಅಂಶಗಳನ್ನು ಕುರಿತಂತೆ ಸ್ಪಷ್ಟೀಕರಣ ಅಗತ್ಯ. ಯಾವ ಸಂಸ್ಥೆಗಳನ್ನು ನಾವು ಬ್ಯಾಂಕುಗಳೆಂದು ಪರಿಗಣಿಸುತ್ತೇವೆಂಬುದು ಒಂದು. ಹಿಂದಿ ಹಾಗೂ ಇತರ ಭಾಷೆಗಳಿಗೆ ಸಂಬಂಧಿಸಿದಂತೆ ಕನ್ನಡದ ಸ್ಥಾನಮಾನಗಳೇನೆಂಬುದು ಇನ್ನೊಂದು ಅಂಶ.

ಕರ್ನಾಟಕದಲ್ಲಿರುವ ಬ್ಯಾಂಕುಗಳನ್ನು ಅವುಗಳ ಸಂಘಟನೆ ಹಾಗೂ ಕಾರ್ಯಸ್ವರೂಪಗಳ ದೃಷ್ಟಿಯಿಂದ ಮೂರು ಬಗೆಯಾಗಿ ವಿಂಗಡಿಸಬಹುದು. ಸಹಕಾರಿ ಕ್ಷೇತ್ರದಲ್ಲಿ ಸ್ಥಾಪಿತವಾಗಿ, ಠೇವಣಿಗಳನ್ನು ಸ್ವೀಕರಿಸುವ ಹಾಗೂ ಸಾಲಗಳನ್ನು ನೀಡುವ ಸಂಸ್ಥೆಗಳು ಒಂದು ಬಗೆ. ಪಾಶ್ಚಾತ್ಯ ದೇಶಗಳ ವಾಣಿಜ್ಯ ಬ್ಯಾಂಕುಗಳ ಮಾದರಿಯಲ್ಲಿ ಸ್ಥಾಪಿತವಾಗಿ ಕಾರ್ಯನಿರತವಾಗಿರುವವುಗಳದು ಇನ್ನೊಂದು ಬಗೆ. ಸಹಕಾರಿ ಕ್ಷೇತ್ರಕ್ಕೆ ಒಳಪಡದ, ವಾಣಿಜ್ಯ ಬ್ಯಾಂಕುಗಳೆಂದೂ ಕರೆಯಲಾಗದ, ದೀರ್ಘಾವಧಿ ಸಾಲ ನೀಡಿಕೆಯಲ್ಲಿ ನಿರತವಾಗಿ ಕೈಗಾರಿಕೆ—ವ್ಯವಸಾಯಗಳ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಸಂಸ್ಥೆಗಳದು ಮೂರನೆಯ ಬಗೆ. ಸಹಕಾರಿ ಕ್ಷೇತ್ರದ ಸಂಸ್ಥೆಗಳಲ್ಲಿ ವಾಣಿಜ್ಯ ಬ್ಯಾಂಕಿಂಗ್ ವ್ಯವಹಾರ ಮಾಡುವ ಸಂಸ್ಥೆಗಳೇ ಅಲ್ಲದೆ, ಅಭಿವೃದ್ಧಿ ಕಾರ್ಯಕ್ಕಾಗಿ ದೀರ್ಘಕಾಲಿಕ ಸಾಲದ ನೆರವು ನೀಡುತ್ತಿರುವ ಸಂಸ್ಥೆಗಳೂ ಸೇರುತ್ತವೆ. ವಾಣಿಜ್ಯ ಬ್ಯಾಂಕುಗಳಲ್ಲಿ ಅಖಿಲ ಭಾರತ ವ್ಯಾಪ್ತಿಯ ಸರ್ಕಾರಿ ವಲಯದ ಬ್ಯಾಂಕುಗಳೂ ಖಾಸಗಿ ಒಡೆತನದ ಬ್ಯಾಂಕುಗಳೂ ಅಲ್ಲದೆ, ಜಿಲ್ಲೆಗೆ ಒಂದರಂತೆ ಸ್ಥಾಪಿತವಾಗಿರುವ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳೂ ಬರುತ್ತವೆ. ಕೈಗಾರಿಕೆ ವ್ಯವಸಾಯಗಳ ಅಭಿವೃದ್ಧಿಗೆ ಧನ ಸಹಾಯ ಮಾಡುವ ಸಂಸ್ಥೆಗಳಲ್ಲಿ ಅಖಿಲ ಭಾರತ ವ್ಯಾಪ್ತಿಯ ಭಾರತೀಯ ಕೈಗಾರಿಕಾ ಹಣಕಾಸು ನಿಗಮ, ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕು, ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಗಾಗಿ ರಾಷ್ಟ್ರೀಯ ಬ್ಯಾಂಕು ಮುಂತಾದವಲ್ಲದೆ, ರಾಜ್ಯಕ್ಕೆ ಸೀಮಿತವಾದ ಹಣಕಾಸು ನಿಗಮವೇ ಮುಂತಾದವೂ ಇವೆ. ಇವೆಲ್ಲವೂ ಅಲ್ಲದೆ, ಕೇಂದ್ರೀಯ ಬ್ಯಾಂಕ್ ಆದ ಭಾರತೀಯ ರಿಸರ್ವ್ ಬ್ಯಾಂಕ್ ಒಂದು ವಿಶಿಷ್ಟ ಸಂಸ್ಥೆ. ಒಟ್ಟಿನಲ್ಲಿ ಈ ಎಲ್ಲ ಸಂಸ್ಥೆಗಳನ್ನೂ ಬ್ಯಾಂಕುಗಳೆಂದು ಈ ಲೇಖನದಲ್ಲಿ ಪರಿಗಣಿಸಲಾಗಿದೆ.

ಯಾವ ಯಾವ ಬಗೆಯ ಬ್ಯಾಂಕುಗಳಲ್ಲಿ ಎಷ್ಟೆಷ್ಟು ಮಟ್ಟಿಗೆ ಕನ್ನಡ ಬಳಸಬಹುದೆಂಬುದನ್ನು ವಿವೇಚಿಸುವ ಮುನ್ನ ನಮ್ಮ ದೇಶದ ಸಂವಿಧಾನದ ಚೌಕಟ್ಟಿನಲ್ಲಿ ಕನ್ನಡದ ಸ್ಥಾನಮಾನಗಳೇನು, ಇವನ್ನು ರಾಜ್ಯ ಸರಕಾರಗಳೂ ರಾಜ್ಯದಲ್ಲಿರುವ ಬ್ಯಾಂಕುಗಳೂ ಎಷ್ಟರಮಟ್ಟಿಗೆ ಮಾನ್ಯಮಾಡಿವೆ ಎಂಬುದನ್ನು ಪರಿಶೀಲಿಸುವುದು ಅಗತ್ಯ. ಭಾರತದ ಸಂವಿಧಾನದ ಎಂಟನೆಯ ಅನುಸೂಚಿಯಲ್ಲಿ ಉಲ್ಲೇಖಿತವಾಗಿರುವ ಹದಿನೈದು ಪ್ರಮುಖ ಭಾರತೀಯ ಭಾಷೆಗಳಲ್ಲಿ ಕನ್ನಡವೂ ಒಂದು. ಇವುಗಳ ಪೈಕಿ ಉರ್ದುವಾಗಲಿ, ಸಂಸ್ಕೃತವಾಗಲಿ, ಇತ್ತೀಚೆಗೆ ಈ ಪಟ್ಟಿಗೆ ಸೇರಿಸಲಾದ ಸಿಂಧಿಯಾಗಲಿ ಯಾವ ಒಂದು ಪ್ರದೇಶದ ಭಾಷೆಯಲ್ಲ. ಉಳಿದವು ಒಂದೊಂದು ಪ್ರದೇಶದ ಅಥವಾ ಒಂದಕ್ಕಿಂತ ಹೆಚ್ಚು ಪ್ರದೇಶಗಳ ಪ್ರಮುಖ ಭಾಷೆಗಳು. ತನ್ನ ಜ್ಞಾತಿಭಾಷೆಗಳಾದ ಉರ್ದು ಹಾಗೂ ಹಿಂದೂಸ್ತಾನಿಯೂ ಸೇರಿದಂತೆ ಹಿಂದಿಯನ್ನಾಡುವವರ ಸಂಖ್ಯೆ ಭಾರತದ ಒಟ್ಟು ಜನಸಂಖ್ಯೆಯ ಶೇಕಡ 46ರಷ್ಟು ಇದ್ದದ್ದರಿಂದ ಅದನ್ನು ಭಾರತ ಒಕ್ಕೂಟದ ಅಧಿಕೃತ ಭಾಷೆಯೆಂದು ಸಂವಿಧಾನ ಸ್ವೀಕರಿಸಿತು. ದೇಶದ ಅರ್ಧಕ್ಕಿಂತ ಕಡಿಮೆ ಸಂಖ್ಯೆಯ ಜನರು ಆಡುವ ಭಾಷೆಯನ್ನು ಎಲ್ಲ ಜನರ ಮೇಲೂ

* 1984ರ ಮಾರ್ಚ್ 26ರಂದು ಬೆಂಗಳೂರಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಏರ್ಪಡಿಸಿದ್ದ 'ಕನ್ನಡ ಆಡಳಿತ ಭಾಷಾ ವಿಚಾರ ಸಂಕಿರಣ'ದಲ್ಲಿ ಮಂಡಿಸಿದ ಪ್ರಬಂಧ.

ಹೇರುವುದರ ಅಪಾಯವನ್ನು ನಮ್ಮ ಸಂವಿಧಾನಕಾರರು ಅರಿಯದಿರಲಿಲ್ಲ. ಹಿಂದಿಯಷ್ಟೇ ಹಳೆಯದಾದ, ಹಿಂದಿಗಿಂತ ಬಲು ಪ್ರಾಚೀನವಾದ ಪ್ರಾದೇಶಿಕ ಭಾಷೆಗಳೂ ತಂತಮ್ಮ ಕ್ಷೇತ್ರಗಳಲ್ಲಿ ಸಮೃದ್ಧವಾಗಿ ಬೆಳೆಯುತ್ತ ಮುಂದುವರಿದು ಆಯಾ ಪ್ರದೇಶಗಳ ಜನರ ಆಶೋತ್ತರಗಳ ಪೂರೈಕೆಯಲ್ಲೂ ವ್ಯವಹಾರ ನಿರ್ವಹಣೆಯಲ್ಲೂ ಆಡಳಿತದಲ್ಲೂ ಪ್ರಮುಖ ಪಾತ್ರ ನಿರ್ವಹಿಸಲು ಅವಕಾಶ ಮಾಡಿಕೊಡುವುದು ಅಗತ್ಯ ವೆಂಬುದನ್ನು ಅವರು ಮನಗಂಡಿದ್ದರು. ಅಂತೆಯೇ ಸಂವಿಧಾನದಲ್ಲಿ ಈ ಭಾಷೆಗಳನ್ನು ಕುರಿತಂತೆಯೂ ವ್ಯಾಪಕವಾದ ಉಪಬಂಧಗಳನ್ನು ಮಾಡಲಾಗಿದೆಯೆಂಬುದನ್ನು ನಾವು ಮರೆಯಬಾರದು. ನಮ್ಮ ಸಂವಿಧಾನದ 17ನೆಯ ಭಾಗವಿಡೀ ಅಧಿಕೃತ ಭಾಷೆಯನ್ನು ಕುರಿತ ವಿಧಿಗಳಿಗೆ ಮೀಸಲಾದದ್ದು. ಇವುಗಳ ಪೈಕಿ ಒಂದು ಅಧ್ಯಾಯದಲ್ಲಿ ಒಕ್ಕೂಟದ ಅಧಿಕೃತ ಭಾಷೆಯನ್ನು ಕುರಿತು ಹೇಳಿದ್ದರೆ, ಇನ್ನೊಂದು ಅಧ್ಯಾಯದಲ್ಲಿ ಪ್ರಾದೇಶಿಕ ಭಾಷೆಗಳನ್ನು ಕುರಿತು ಹೇಳಲಾಗಿದೆ. ಒಕ್ಕೂಟದ ಅಧಿಕೃತ ಭಾಷೆಯನ್ನು ಕುರಿತ ಅನುಚ್ಛೇದಗಳು 343 ಮತ್ತು 344. ಪ್ರಾದೇಶಿಕ ಭಾಷೆಗಳಿಗೆ 345, 346, 347—ಹೀಗೆ ಮೂರು ಅನುಚ್ಛೇದಗಳು ಮೀಸಲಾಗಿವೆ. ಆಯಾ ರಾಜ್ಯಗಳ ವಿಧಾನಮಂಡಲಗಳ ಬಹುಸಂಖ್ಯಾತ ಸದಸ್ಯರು ಅಲ್ಲಿಯ ಬಹ್ವಂಶದ ಜನರು ಆಡುವ ಭಾಷೆಗಳನ್ನು ತಂತಮ್ಮ ರಾಜ್ಯಗಳ ಅಧಿಕೃತ ಭಾಷೆಗಳೆಂದು ಶಾಸನ ಮಾಡುವ ಹಕ್ಕುಳ್ಳವರೆಂಬುದನ್ನು ಈ ಅನುಚ್ಛೇದಗಳಲ್ಲಿ ಹೇಳಲಾಗಿದೆ. ಆದ್ದರಿಂದ Official language ಅಥವಾ ಅಧಿಕೃತ ಭಾಷೆ ಅಥವಾ ರಾಜಭಾಷೆ ಎಂದರೆ ಹಿಂದಿ ಮಾತ್ರವೇ ಅಲ್ಲ. ಆಯಾ ರಾಜ್ಯಗಳಲ್ಲಿ ಅಲ್ಲಿಯ ವಿಧಾನಮಂಡಲಗಳು ಸ್ವೀಕರಿಸಿದ ಬಹುಸಂಖ್ಯಾತರ ಭಾಷೆಗಳೂ ಅಧಿಕೃತ ಭಾಷೆಗಳೇ. ರಾಜ್ಯ–ರಾಜ್ಯಗಳ ನಡುವಣ ಸಂಪರ್ಕಕ್ಕೆ ಒಕ್ಕೂಟದ ಅಧಿಕೃತ ಭಾಷೆಯಾದರೆ, ಆಯಾ ರಾಜ್ಯಗಳಲ್ಲಿಯ ಜನರೊಂದಿಗೆ ನಡಸುವ ವ್ಯವಹಾರಗಳು ಅಲ್ಲಿಯ ಪ್ರಾದೇಶಿಕ ಭಾಷೆಗಳಲ್ಲಿಯೇ—ಎಂದರೆ ಅಲ್ಲಿಯ ಅಧಿಕೃತ ಭಾಷೆಗಳಲ್ಲಿಯೇ—ಎಂಬುದು ಸಂವಿಧಾನಕರ್ತರ ಆಶಯವೆಂಬುದನ್ನು ಮನಗಾಣಬೇಕು. ಪರಿವರ್ತನೆಯ ಕಾಲದಲ್ಲಿ ಇಂಗ್ಲಿಷೂ ಮುಂದುವರಿಯತಕ್ಕದ್ದೆಂಬುದೂ, ಕ್ರಮಕ್ರಮವಾಗಿ ಇದರ ಪ್ರಾಮುಖ್ಯ ತಗ್ಗುವುದೆಂಬುದೂ ನ್ಯಾಯವೇ. ಈ ನಿಟ್ಟಿನಲ್ಲಿ ಈಚಿನ ವರ್ಷಗಳಲ್ಲಿ ತೆಗೆದುಕೊಳ್ಳಲಾಗಿರುವ ಕ್ರಮಗಳನ್ನು ಇಲ್ಲಿ ವಿಶದೀಕರಿಸುವ ಅಗತ್ಯವಿಲ್ಲ. ಆದರೆ ಒಂದು ಮುಖ್ಯವಾದ ಅಂಶವನ್ನು ನಾವು ನೆನಪಿನಲ್ಲಿಡಬೇಕು. ಕರ್ನಾಟಕದಲ್ಲಿ ಕನ್ನಡ ಆಡಳಿತ ಭಾಷೆಯೆಂದು ನಾವು ಹೇಳುತ್ತಿದ್ದೇವೆಯಾದರೂ ಅದರ ವ್ಯಾಪ್ತಿ ಆಡಳಿತಕ್ಕಷ್ಟೇ ಸೀಮಿತವಲ್ಲ. ಸಂವಿಧಾನದ ಪ್ರಕಾರ ಅದು ನಮ್ಮ ಅಧಿಕೃತ ಭಾಷೆ. ಇಲ್ಲಿಯ ಜನರೊಂದಿಗಿನ ಎಲ್ಲ ವ್ಯವಹಾರಗಳೂ ಅಧಿಕೃತವಾಗಿ ನಡೆಯಬೇಕಾದ್ದು ಈ ಭಾಷೆಯಲ್ಲೇ. ರಾಜ್ಯದಲ್ಲೇ ಸ್ಥಾಪಿತವಾದ, ರಾಜ್ಯಕ್ಕೆ ಸೀಮಿತವಾದ ಸಂಸ್ಥೆಗಳಾಗಿರಲಿ, ಅಖಿಲ ಭಾರತ ವ್ಯಾಪ್ತಿಯ ಸಂಸ್ಥೆಗಳೇ ಆಗಿರಲಿ—ಎಲ್ಲ ಸಂಸ್ಥೆಗಳೂ ಇಲ್ಲಿಯ ಜನರೊಂದಿಗೆ ವ್ಯವಹರಿಸಬೇಕಾದ್ದು ಇಲ್ಲಿಯ ಭಾಷೆಯಲ್ಲೇ. ಇದು ಕೇವಲ ನ್ಯಾಯದ ಪ್ರಶ್ನೆಯಲ್ಲ. ಸಹಜತೆಯ ಪ್ರಶ್ನೆ, ಸಮರ್ಪಕತೆಯ ಪ್ರಶ್ನೆ, ಸಾರ್ಥಕತೆಯ ಪ್ರಶ್ನೆ.

ಬ್ಯಾಂಕುಗಳು ಎಂದರೆ ನಮಗೆ ಥಟ್ಟನೆ ನೆನಪಿಗೆ ಬರುವ ಸಂಸ್ಥೆಗಳೆಂದರೆ ವಾಣಿಜ್ಯ ಬ್ಯಾಂಕುಗಳೇ. ಪ್ರಮುಖ ವಾಣಿಜ್ಯ ಬ್ಯಾಂಕುಗಳೆಲ್ಲ ಇಂದು ಸರ್ಕಾರಿ ಸ್ವಾಮ್ಯಕ್ಕೆ ಒಳಪಟ್ಟಿವೆ. ಕೇಂದ್ರ ಸರ್ಕಾರದ ಒಡೆತನದ ಬ್ಯಾಂಕುಗಳೂ ಖಾಸಗಿ ಬ್ಯಾಂಕುಗಳೂ ಇಂದು ರಾಷ್ಟ್ರವ್ಯಾಪಿಯಾಗಿವೆ. ದೇಶದಲ್ಲಿ ದಕ್ಷಿಣೋತ್ತರವಾಗಿ, ಪೂರ್ವ ಪಶ್ಚಿಮವಾಗಿ ಇವುಗಳ ಶಾಖೆಗಳು ಹರಡಿವೆ. ಅಖಿಲ ಭಾರತ ವ್ಯಾಪ್ತಿಯ ಈ ಬ್ಯಾಂಕಿಂಗ್ ಸಂಸ್ಥೆಗಳು ಯಾವ ಭಾಷೆಯಲ್ಲಿ ವ್ಯವಹರಿಸಬೇಕೆಂಬುದು ಮುಖ್ಯವಾದ ಪ್ರಶ್ನೆ. ಅನೇಕ ಸರ್ಕಾರಿ ವಲಯ ಬ್ಯಾಂಕುಗಳು 1967ರ ತಿದ್ದುಪಡಿ ಸಹಿತವಾದ 1963ರ ಅಧಿಕೃತ ಭಾಷೆಗಳ ಅಧಿನಿಯಮದಲ್ಲಿ ಭಾರತ ಸರ್ಕಾರದ ಒಡೆತನ ಅಥವಾ ನಿಯಂತ್ರಣಕ್ಕೆ ಒಳಪಟ್ಟ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಹೇಳಿರುವ ಮಾತುಗಳನ್ನು ಅಕ್ಷರಶಃ ಅನ್ವಯಿಸಿಕೊಂಡು ತುಂಬಾ ಸೀಮಿತವಾದ ದೃಷ್ಟಿ ತಳೆದಿವೆ. ಅಂಥ ಸಂಸ್ಥೆಗಳ ನಿರ್ಣಯಗಳು, ಸಾಮಾನ್ಯ ಆದೇಶಗಳು, ನಿಯಮಗಳು, ಪ್ರಕಟಣೆಗಳು, ಒಪ್ಪಂದಗಳು ಹಿಂದಿ ಇಂಗ್ಲಿಷುಗಳಲ್ಲಿ ಇರಬೇಕಾಗುತ್ತದೆ ಎಂದು ಹೇಳುತ್ತವೆ. ಹೀಗೆಂದರೆ ಇತರ ಭಾಷೆಗಳಿಗೆ ಸ್ಥಾನವೇ ಇಲ್ಲ ಎಂದು ಇವುಗಳ ಭಾವನೆ. ಎತ್ತಿಗಿಂತಲೂ ಮುಂದೆ ಗೋಣಿ ಹಾರಿತು ಎಂಬ ಹಾಗೆ ಕೆಲವು ಬ್ಯಾಂಕುಗಳು ಕೇಂದ್ರ ಸರ್ಕಾರಕ್ಕಿಂತ ತೀವ್ರವಾದ ವೇಗದಲ್ಲಿ ತಮ್ಮ ಇಡೀ ಆಡಳಿತ ಹಾಗೂ ವ್ಯವಹಾರಗಳನ್ನು ಹಿಂದೀಮಯವಾಗಿ ಮಾಡಲು ಹವಣಿಸುತ್ತಿವೆ. ಅಧಿಕೃತ ಭಾಷೆಯ ಜಾರಿ ಎಂದರೆ ಹಿಂದಿಯ ಜಾರಿ ಎಂಬುದಾಗಿ ಭ್ರಮಿಸಿವೆ. ಈ ವಿಪರೀತ ದೃಷ್ಟಿಯನ್ನು ತಳೆದರೆ ಇತರ ಭಾಷೆಗಳಿಗೆ ಸ್ಥಾನವೇ ಇರುವುದಿಲ್ಲ. ಈ ನಿಲುವನ್ನು ಕನ್ನಡಿಗರು ಅತ್ಯಂತ ಪ್ರಬಲವಾಗಿ ವಿರೋಧಿಸುವುದು ಅನಿವಾರ್ಯವಾಗುತ್ತದೆ. ಪ್ರಾದೇಶಿಕ ಭಾಷೆಗಳಿಗೂ ಅಧಿಕೃತ ಭಾಷೆಗಳ ಸ್ಥಾನವನ್ನು ನೀಡಿರುವ ಸಂವಿಧಾನದ 345–347ನೆಯ ಅನುಚ್ಛೇದಗಳ ಆಶಯವನ್ನು ಉಲ್ಲಂಘಿಸುವ ಪ್ರಯತ್ನವನ್ನು ತಡೆಗಟ್ಟಲೇಬೇಕು. ಇದು ಹಿಂದೀತರ ಭಾಷೆಗಳನ್ನಾಡುವವರಿಗೆ ಸಂವಿಧಾನದಲ್ಲೇ ನೀಡಲಾಗಿರುವ ಹಕ್ಕುಗಳ ಮೇಲೆ ನಡಸಲಾಗಿರುವ ಆಕ್ರಮಣ, ಹಿಂದೀತರ ಭಾಷೆಗಳನ್ನಾಡುವವರೇ ಬಹುಸಂಖ್ಯಾತರೆಂಬ ಸತ್ಯಕ್ಕೆ ಮಾಡಲಾಗಿರುವ ಅಪಚಾರ. ಅಧಿಕೃತ ಭಾಷೆಗಳ ಅಧಿನಿಯಮವನ್ನೇ ತೆಗೆದುಕೊಂಡರೂ, ಅನ್ಯಭಾಷೆಗಳಲ್ಲಿ ವ್ಯವಹಾರ ನಡಸಬಾರದೆಂಬ ನಿಷೇಧವೇನೂ ಇಲ್ಲವೆಂಬುದನ್ನು ಕೂಡ ಅನೇಕರು ಮರೆತಿರುವುದು ದುರ್ದೈವದ ಸಂಗತಿ.

ಅಧಿಕೃತ ಭಾಷೆಗಳ ಅಧಿನಿಯಮದ 8ನೆಯ ಪ್ರಕರಣದ ಪ್ರಕಾರ 1975ರಲ್ಲಿ ಪ್ರಕಟಿಸಲಾದ ನಿಯಮಗಳಲ್ಲಿ ನೀಡ

ಲಾಗಿರುವ ವಿಶದೀಕರಣವನ್ನು ನೋಡಿಯಾದರೂ ಇಂಥವರು ವಿವೇಕವನ್ನು ಪಡೆಯಬೇಕು. ಹಿಂದಿ ಭಾಷೆ ಆಡುವ ರಾಜ್ಯಗಳೊಡನೆ ಕೇಂದ್ರ ಸರ್ಕಾರದ ಪತ್ರವ್ಯವಹಾರ ಹಿಂದಿಯಲ್ಲಿರತಕ್ಕದ್ದು ; ಹಿಂದಿ ಅರ್ಥವಾಗುವ ರಾಜ್ಯಗಳೊಡನೆ ಸಾಮಾನ್ಯವಾಗಿ ಹಿಂದಿಯಲ್ಲಿರತಕ್ಕದ್ದು ; ಉಳಿದ ರಾಜ್ಯಗಳೊಡನೆ ಹಾಗೂ ಅಲ್ಲಿಯ ಯಾವುದೇ ಕಛೇರಿ ಅಥವಾ ವ್ಯಕ್ತಿಯೊಡನೆ ವ್ಯವಹಾರ ಇಂಗ್ಲಿಷಿನಲ್ಲಿರತಕ್ಕದ್ದು ಎಂಬುದಾಗಿ ನಿಬಂಧನೆಗಳು ತಿಳಿಸುತ್ತವೆ. ಹಿಂದಿಯನ್ನು ಅಧಿಕೃತ ಭಾಷೆಯಾಗಿ ಸ್ವೀಕರಿಸದಿರುವ ರಾಜ್ಯಗಳೆಲ್ಲ ಇಂಗ್ಲಿಷಿನ ಮುಂದುವರಿಕೆ ಅಗತ್ಯವಿಲ್ಲವೆಂದು ತಂತಮ್ಮ ವಿಧಾನಸಭೆಗಳಲ್ಲಿ ನಿರ್ಣಯ ಮಾಡುವವರೆಗೂ ಈ ಸ್ಥಿತಿ ಮುಂದುವರಿಯತಕ್ಕದ್ದು ಎಂಬುದಾಗಿ ಅಧಿಕೃತ ಭಾಷಾ ಅಧಿನಿಯಮ ಹೇಳುತ್ತದೆ.

ಆದ್ದರಿಂದ ರಾಜ್ಯದಿಂದ ಹೊರಗೂ ಹಬ್ಬಿರುವ ಬ್ಯಾಂಕಿಂಗ್ ಸಂಸ್ಥೆಗಳು ಇಲ್ಲಿಯ ಜನಕ್ಕೆ ನ್ಯಾಯ ಸಲ್ಲಿಸುವ ಹಾಗೂ ತಮ್ಮ ಕಲಾಪಗಳನ್ನು ಸಾರ್ಥಕಗೊಳಿಸುವ ದೃಷ್ಟಿಯಿಂದ ಈ ಸೂತ್ರಗಳನ್ನು ಸ್ಥೂಲವಾಗಿ ಅನುಸರಿಸುವುದು ಯುಕ್ತವೆಂದು ಕಾಣುತ್ತದೆ. ರಾಜ್ಯದೊಳಗಣ ವ್ಯವಹಾರಗಳೆಲ್ಲ ಇಲ್ಲಿಯ ಅಧಿಕೃತ ಭಾಷೆಯಾದ ಕನ್ನಡದಲ್ಲೇ ನಡೆಯಲಿ. ಇಲ್ಲಿಯ ಬ್ಯಾಂಕಿಂಗ್ ಕಛೇರಿಗಳು ತಮ್ಮ ಲೆಕ್ಕಪತ್ರಗಳನ್ನು ಕನ್ನಡದಲ್ಲೇ ಇಡುವುದು ಸಾಧು. ಇತರ ರಾಜ್ಯಗಳ ಶಾಖೆಗಳು ಹಾಗೂ ಕೇಂದ್ರ ಕಛೇರಿಯೊಡನೆ ವ್ಯವಹಾರ ಇಂಗ್ಲಿಷ್ ಮತ್ತು ಸಾಧ್ಯವಾದಂತೆಲ್ಲ ಹಿಂದಿಯಲ್ಲಿ ನಡೆಯಬಹುದು. ಕೇಂದ್ರದ ಕೆಲವರ ಅವಗಾಹನೆಯ ಅಗತ್ಯದ ಕಾರಣವನ್ನೊಡ್ಡಿ ಇಲ್ಲಿಯ ಎಲ್ಲ ವ್ಯವಹಾರಗಳನ್ನೂ ಜನಸಾಮಾನ್ಯರಿಗೆ ತಿಳಿಯದ ಭಾಷೆಯಲ್ಲಿ ನಡಸುವುದರಿಂದ ಯಾವ ಪುರುಷಾರ್ಥವೂ ಸಾಧಿಸುವುದಿಲ್ಲ. ಪ್ರತಿಯಾಗಿ ವಿಪರೀತ ಹಿಂಸೆಯೇ ಆಗುತ್ತದೆ.

ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣವಾದಂದಿನಿಂದ ಈಚೆಗೆ ಅವುಗಳ ದೃಷ್ಟಿ, ಧೋರಣೆ, ಸ್ವರೂಪ ಹಾಗೂ ವ್ಯವಹಾರಗಳಲ್ಲಿ ಆಗಿರುವ ಕ್ರಾಂತಿಕಾರಕ ಬದಲಾವಣೆಗಳ ನಿಟ್ಟಿನಿಂದಲೂ ಈ ಬ್ಯಾಂಕುಗಳು ಪ್ರಾದೇಶಿಕ ಭಾಷೆಗಳನ್ನು ಬಳಸುವುದು ಅತ್ಯವಶ್ಯ. ಹಿಂದೆ ಬ್ಯಾಂಕುಗಳು ಮಧ್ಯಮ ಹಾಗೂ ಉನ್ನತ ವರ್ಗಗಳ ಸಂಸ್ಥೆಗಳಾಗಿದ್ದುವು. ಅವುಗಳ ಶಾಖೆಗಳೂ ಕಲಾಪಗಳೂ ಬಹುತೇಕ ನಗರಗಳಿಗೇ ಸೀಮಿತವಾಗಿದ್ದುವು. ಅವುಗಳೊಂದಿಗೆ ವ್ಯವಹಾರ ನಡಸುವವರು ಸಾಮಾನ್ಯವಾಗಿ ಇಂಗ್ಲಿಷ್ ತಿಳಿದವರಾಗಿದ್ದರು. ಇಂಗ್ಲಿಷ್ ತಿಳಿಯದೆಂದು ಹೇಳಿಕೊಳ್ಳುವುದೂ ಅವಮಾನಕರವೆಂಬ ಭಾವನೆ ಇದ್ದ ಕಾಲವದು. ಇಂದು ಪರಿಸ್ಥಿತಿ ಬದಲಾಗಿದೆ. ಬ್ಯಾಂಕುಗಳು ಇಂದು ವರ್ಗಪ್ರಜ್ಞೆಯನ್ನು ತೊಡೆದು ಸಮೂಹಪ್ರಜ್ಞೆಯನ್ನು ಬೆಳಸಿಕೊಳ್ಳುತ್ತಿವೆ. ಜನಸಾಮಾನ್ಯರ ಆರ್ಥಿಕ ಸಾಮಾಜಿಕ ಉತ್ಥಾನದ ಹೊಣೆ ಬ್ಯಾಂಕುಗಳದು. ಅಂತೆಯೇ ಇಂದು ಗ್ರಾಮಪ್ರದೇಶಗಳಲ್ಲಿ ಬ್ಯಾಂಕು ಶಾಖೆಗಳು ಹೆಚ್ಚುಹೆಚ್ಚಾಗಿ ತೆರೆಯುತ್ತಿವೆ. ಇಂದು ವಾಣಿಜ್ಯ ಬ್ಯಾಂಕುಗಳಿಗೆ ವಾಣಿಜ್ಯ ದೃಷ್ಟಿಗಿಂತ, ಲಾಭದೃಷ್ಟಿಗಿಂತ ಸೇವಾದೃಷ್ಟಿಯೇ ಮುಖ್ಯವಾಗಿದೆ. ಇಪ್ಪತ್ತು ಅಂಶಗಳ ಕಾರ್ಯಕ್ರಮ, ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆ, ಹಳ್ಳಿಗಳ ದತ್ತು ಸ್ವೀಕಾರ, ಅಗ್ರ ಬ್ಯಾಂಕಿಂಗ್ ಪರಿಕಲ್ಪನೆ ಮುಂತಾದವೆಲ್ಲ ಸಫಲವಾಗಬೇಕಾದರೆ ಬ್ಯಾಂಕುಗಳು ಹಳ್ಳಿಗರೊಂದಿಗೆ ಅವರ ಭಾಷೆಯಲ್ಲಿ ವ್ಯವಹರಿಸುವುದು ಅತ್ಯಗತ್ಯ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಂತೂ ಕನ್ನಡಮಯವೇ ಆಗಬೇಕಾಗುತ್ತದೆ. ಹಳ್ಳಿಗರ ಸ್ನೇಹಿತ, ದಾರ್ಶನಿಕ, ಮಾರ್ಗದರ್ಶಿ ಆಗಬಯಸುವ ಬ್ಯಾಂಕು ಅವರನ್ನು ಅರ್ಥಮಾಡಿಕೊಳ್ಳಬೇಕಾದರೆ, ಅವರು ಬ್ಯಾಂಕನ್ನು ಅರಿತುಕೊಳ್ಳಬೇಕಾದರೆ ಅದು ಅವರ ಭಾಷೆಯಲ್ಲೇ ವ್ಯವಹಾರ ನಡಸಬೇಕಾದ್ದು ಅನಿವಾರ್ಯ. ಗ್ರಾಮಾಂತರ ಪ್ರದೇಶಗಳಲ್ಲಿ ಬಳಸಲಾಗುವ ಕೆಲವು ನಮೂನೆಗಳನ್ನು ಕನ್ನಡದಲ್ಲಿ ಅಚ್ಚುಹಾಕಿಸಿದ ಮಾತ್ರಕ್ಕೆ ಇದು ಆಗದು. ಬ್ಯಾಂಕಿನದು ಕನ್ನಡತನವಾಗಬೇಕು, ಕನ್ನಡ ಮನವಾಗಬೇಕು. ಕನ್ನಡ ಅರಿಯದವರು ಗ್ರಾಮೀಣ ಶಾಖೆಗಳಲ್ಲಿ ಕುಳಿತು ಕನ್ನಡದಲ್ಲಿ ವ್ಯವಹಾರ ನಡಸಲಾರರು. ಅವರ ಲೆಕ್ಕಪತ್ರಗಳೆಲ್ಲ ಇಂಗ್ಲಿಷಿನಲ್ಲೋ ಹಿಂದಿಯಲ್ಲೋ ಇದ್ದು ನಾಲ್ಕಾರು ನಮೂನೆಗಳು ಮಾತ್ರ ಕನ್ನಡದಲ್ಲಿದ್ದರೆ ಅದರಿಂದ ಕನ್ನಡ ವಾತಾವರಣ ಮೂಡದು. ಬ್ಯಾಂಕ್ ಕಛೇರಿಗೆ ಬರುವ ಶ್ರೀಸಾಮಾನ್ಯನಲ್ಲಿ ಅನಾಥಪ್ರಜ್ಞೆ ಮೂಡುವಂತಾಗಬಾರದು ; ತಾನೊಬ್ಬ ಪರಕೀಯ ಎನಿಸಬಾರದು. ಬ್ಯಾಂಕಿರುವುದು ತನಗಾಗಿ, ಬ್ಯಾಂಕಿನಲ್ಲಿರುವವರು ತನ್ನವರು ಎನಿಸಿದಾಗಲೇ ಬ್ಯಾಂಕಿನ ಸಾಮಾಜಿಕ ಉದ್ದೇಶ ಸಾರ್ಥಕವಾಗುತ್ತದೆ. ಇಂದು ಬ್ಯಾಂಕುಗಳು ಈ ನಿಟ್ಟಿನಲ್ಲಿ ಸಾಕಷ್ಟು ಯಶಸ್ವಿಯಾಗದಿದ್ದರೆ ಅದಕ್ಕೆ ಭಾಷೆಯ ತೊಡಕು ಒಂದು ಮುಖ್ಯ ಕಾರಣವೆಂಬುದನ್ನು ಮರೆಯುವಂತಿಲ್ಲ.

ಕನ್ನಡ ಬಳಕೆಯನ್ನು ಗ್ರಾಮೀಣ ಬ್ಯಾಂಕುಗಳಿಗೆ ಮಾತ್ರ ಸೀಮಿತಗೊಳಿಸುವುದರಲ್ಲೂ ಅರ್ಥವಿಲ್ಲ. ಕರ್ನಾಟಕದಲ್ಲಿರುವ ಎಲ್ಲ ಕಛೇರಿಗಳಲ್ಲೂ ಇದು ಬಂದಾಗ ಮಾತ್ರ ಇದಕ್ಕೆ ಮರ್ಯಾದೆ ಪ್ರಾಪ್ತವಾಗುತ್ತದೆ. ಕನ್ನಡವನ್ನು ಬಳಸಿದರೆ ತನ್ನನ್ನು ಇತರರು ಹಳ್ಳಿಗನೆಂದು ಭಾವಿಸುವರೆಂಬ ಭಾವನೆ ಗ್ರಾಹಕನಲ್ಲಿ ಮೂಡಬಾರದು. ಎಲ್ಲ ಬ್ಯಾಂಕ್ ಶಾಖೆಗಳಲ್ಲೂ ಕನ್ನಡದ ನಮೂನೆಗಳು ಲಭ್ಯವಾಗಬೇಕು. ಕನ್ನಡ ಬಾರದ, ಅನ್ಯರಾಜ್ಯಗಳಿಂದ ಬಂದ ಗ್ರಾಹಕರಿಗೆ ಇಂಗ್ಲಿಷ್ ಅಥವಾ ಹಿಂದಿಯ ನಮೂನೆಗಳನ್ನು ಕೊಡಬಹುದು. ಕನ್ನಡವನ್ನು ಕಡ್ಡಾಯವಾಗಿ ಹೇರಬೇಕೆಂದೇನೂ ಅಲ್ಲ, ಆದರೆ ಕನ್ನಡವನ್ನು ಬಳಸುವುದು ಸಹಜವಾಗುವಂತೆ ಅದಕ್ಕೆ ಅಗತ್ಯವಾದ ವಾತಾವರಣವನ್ನು ಸೃಷ್ಟಿಸುವುದು ಮುಖ್ಯ.

ಕರ್ನಾಟಕದ ಬ್ಯಾಂಕ್ ಕಛೇರಿಗಳಲ್ಲಿ ಕನ್ನಡವನ್ನು ಜಾರಿಗೆ ತರುವುದು ಏನೇನೂ ಕಷ್ಟವಿಲ್ಲ. ಬ್ಯಾಂಕುಗಳ ವ್ಯವಹಾರ ಬಹುತೇಕ ಅಚ್ಚಾದ ನಮೂನೆಗಳನ್ನು ತುಂಬುವುದರ ಮೂಲಕವೇ ನಡೆಯುತ್ತದೆ. ಬ್ಯಾಂಕುಗಳು ಸಾಮಾನ್ಯವಾಗಿ ಬರೆಯುವ ಅನೇಕ ಪತ್ರಗಳೂ ಅಚ್ಚಾಗಿರುತ್ತವೆ. ಇವನ್ನೆಲ್ಲ ಪ್ರಾದೇಶಿಕ ಭಾಷೆಯಲ್ಲಿ ಅಚ್ಚುಹಾಕಿಸಿದರೆ ಸಾಕು.

ಬ್ಯಾಂಕ್ ಆಗಲಿ, ಗ್ರಾಹಕನಾಗಲಿ, ಸಾರ್ವಜನಿಕರಲ್ಲಿ ಯಾರೇ ಆಗಲಿ ಸಂಬಂಧಪಟ್ಟ ನಮೂನೆಯನ್ನು ಸುಲಭ ವಾಗಿ ತುಂಬಬಹುದು. ಕಾನೂನಿನ ದೃಷ್ಟಿಯಿಂದಲೂ ಇದು ಯಾವ ತೊಡಕನ್ನೂ ಗೊಂದಲವನ್ನೂ ಉಂಟು ಮಾಡುವುದಿಲ್ಲ. ಚೆಕ್ಕು, ಪಾಸು ಬುಕ್ಕು, ಜಮಾಪಟ್ಟಿ, ಖಾತೆ ತೆರೆಯಲು ಅರ್ಜಿ, ಠೇವಣಿ ಪತ್ರಗಳು ಮುಂತಾದ ಎಲ್ಲವೂ ಕನ್ನಡದಲ್ಲಿದ್ದರೆ ಬ್ಯಾಂಕುಗಳಲ್ಲಿ ಪ್ರಾದೇಶಿಕ ಭಾಷೆ ಬಹಳ ಮಟ್ಟಿಗೆ ಬಂದಹಾಗೆಯೇ ಆಗುತ್ತದೆ. ಕರಾರುಗಳು, ಕಾನೂನಿನ ಪತ್ರಗಳು, ದಸ್ತಾವೇಜುಗಳು ಇವನ್ನೆಲ್ಲ ತಜ್ಞರ ನೆರವಿನಿಂದ ಒಂದು ಸಾರಿ ಕನ್ನಡಿಸಿಕೊಂಡರೆ ಅವು ಎಂದೆಂದಿಗೂ ಬಳಕೆಗೆ ಬರುತ್ತವೆ. ಬಹುತೇಕ ಎಲ್ಲ ಬ್ಯಾಂಕು ಗಳೂ ಇವನ್ನೇ ಬಳಸಬಹುದಾದ್ದರಿಂದ ತೊಂದರೆಯೇನೂ ಇರುವುದಿಲ್ಲ. ಏಕರೂಪತೆಯೂ ಸಾಧಿಸುತ್ತದೆ.

ಬ್ಯಾಂಕುಗಳಲ್ಲಿ ಬಳಸಲಾಗುವ ಪಾರಿಭಾಷಿಕ ಪದಗಳಿಗೆ ಕನ್ನಡದಲ್ಲಿ ಸಮಾನ ಪದಗಳನ್ನು ರೂಪಿಸುವುದೇನೂ ಕಷ್ಟವಲ್ಲ. ರಾಜ್ಯದಲ್ಲಿ ಕಾರ್ಯಪ್ರವೃತ್ತವಾಗಿರುವ ಅನೇಕ ಸಹಕಾರಿ ಬ್ಯಾಂಕುಗಳು ಬಹಳ ಹಿಂದಿನಿಂದಲೂ ಕನ್ನಡದಲ್ಲಿ ವ್ಯವಹಾರ ನಡಸುತ್ತಿವೆ. ವಾಣಿಜ್ಯ ಬ್ಯಾಂಕುಗಳು ಬಳಸು ತ್ತಿರುವಂಥ ಹಲವಾರು ನಮೂನೆಗಳನ್ನು ಅವೂ ಬಳಸು ತ್ತಿವೆ. ಅವು ಕನ್ನಡದಲ್ಲೇ ಇವೆ. ಸಹಕಾರಿ ಬ್ಯಾಂಕುಗಳ ಮೇಲ್ಪಂಕ್ತಿಯನ್ನು ರಾಜ್ಯದಲ್ಲಿ ಸ್ಥಾಪಿತವಾದ, ರಾಜ್ಯಕ್ಕೆ ಸೀಮಿತವಾದ ಇತರ ಸಂಸ್ಥೆಗಳೂ ಕೂಡಲೇ ಅನುಸರಿಸುವು ದರಲ್ಲಿ ಏನೂ ತೊಂದರೆಯಿಲ್ಲ. ಈಗಾಗಲೇ ಬಳಕೆಯಲ್ಲಿರದ ಶಬ್ದಗಳನ್ನು ಸೃಷ್ಟಿಸುವುದರಲ್ಲೂ ಏನೇನೂ ತೊಡಕಿಲ್ಲ. ಪಾರಿಭಾಷಿಕ ಪದಗಳ ಸೃಷ್ಟಿಯನ್ನು ಕುರಿತಂತೆ ಮುಖ್ಯವಾಗಿ ಮೂರು ಸೂತ್ರಗಳನ್ನು ಅನುಸರಿಸಬಹುದು. ಎಲ್ಲೆಲ್ಲಿ ನಮ್ಮಲ್ಲಿ ಈಗಾಗಲೇ ಪದಗಳು ಬಳಕೆಯಲ್ಲಿವೆಯೋ ಅಲ್ಲಲ್ಲಿ ಅವನ್ನೇ ಬಳಸಬಹುದು. ಜನರಲ್ಲಿ ರೂಢಿಯಲ್ಲಿರುವ ಪದ ಗಳನ್ನು ಸ್ವೀಕರಿಸಿ ಅವಕ್ಕೆ ಹೊಸ ಅರ್ಥಗಳನ್ನು ತುಂಬಿ ಚಲಾವಣೆಗೆ ತರಬಹುದು. ಇನ್ನು ಕೆಲವು ಪದಗಳನ್ನು ನಾವು ಸಂಸ್ಕೃತದಿಂದ ಎತ್ತಿಕೊಳ್ಳಬಹುದು. ಉರ್ದು, ಪರ್ಷಿಯನ್, ಹಿಂದಿ, ಮರಾಠಿ, ಇಂಗ್ಲಿಷ್ ಮುಂತಾದ ಭಾಷೆಗಳ ಪದಗಳೆಷ್ಟೋ ಈಗಾಗಲೇ ವಾಣಿಜ್ಯ ಕ್ಷೇತ್ರದಲ್ಲಿ ಬಳಕೆಯಲ್ಲಿವೆ. ಉದರಿ, ನಗದು, ಬ್ಯಾಂಕು, ಚೆಕ್ಕು, ಡ್ರಾಫ್ಟು ಮುಂತಾದ ಪದಗಳನ್ನು ಕನ್ನಡದವಲ್ಲವೆಂದು ಹೇಳುವುದಾ ಗದು. ಪಾರಿಭಾಷಿಕ ಪದಗಳು ಸಂಕೇತಗಳು ಮಾತ್ರ. ಕನ್ನಡ ವಾಕ್ಯದ ಶಿಲ್ಪ ಕೆಡದಂತೆ, ಭಾಷಾ ಮರ್ಯಾದೆಗೆ ಭಂಗ ಬಾರದಂತೆ, ಜನ ಸ್ವೀಕರಿಸಬಹುದಾದ, ಯಾವುದೇ ಭಾಷೆಯ ಶಬ್ದಗಳನ್ನು ಎತ್ತಿಕೊಳ್ಳಬಹುದು. ಸಂವಹನವೇ ಮುಖ್ಯ ವಾದ ಗುರಿ. ಕಿವಿಯೇ ಅತ್ಯುತ್ತಮ ತೀರ್ಪುಗಾರ.

ಪಾರಿಭಾಷಿಕ ಪದಗಳನ್ನು ರೂಪಿಸುವಲ್ಲಿ ಸಾಧ್ಯವಾದ ಮಟ್ಟಿಗೆ ಅಖಿಲ ಭಾರತ ದೃಷ್ಟಿಯನ್ನು ಇಟ್ಟುಕೊಂಡಿರ ಬೇಕಾದ್ದು ಅಗತ್ಯ. ಕರ್ನಾಟಕದಲ್ಲಿ ಬ್ಯಾಂಕುಗಳ ವ್ಯವಹಾರದ ಭಾಷೆ ಕನ್ನಡವಾಗಬೇಕು ಎನ್ನುವುದು ಕೇವಲ ಅಭಿಮಾನದ ಮಾತಲ್ಲ; ಸೌಕರ್ಯದ, ಸೌಲಭ್ಯದ ಮಾತು. ನಾವೇನೂ ನಮ್ಮದೇ ಆದ ದ್ವೀಪವೊಂದನ್ನು ನಿರ್ಮಿಸಿಕೊಳ್ಳಬೇಕೆಂ ದೇನೂ ಅಲ್ಲ. ಸಾಧ್ಯವಾದರೆ ಭಾರತದ ಇತರ ಭಾಷೆಗಳಲ್ಲಿ ಚಾಲ್ತಿಯಲ್ಲಿರುವ ಶಬ್ದಗಳನ್ನು ನಾವು ಸ್ವೀಕರಿಸುವುದರಲ್ಲಿ ತಪ್ಪೇನೂ ಇಲ್ಲ. ಕೇಂದ್ರದ ಅಧಿಕೃತ ಭಾಷಾ ವಿಭಾಗದ ಆಶ್ರಯದಲ್ಲಿ ಅರ್ಥಶಾಸ್ತ್ರ, ವಾಣಿಜ್ಯಶಾಸ್ತ್ರ ಮುಂತಾದ ಎಲ್ಲ ವಿಷಯಗಳ ಪಾರಿಭಾಷಿಕ ಪದಗಳಿಗೆ ಭಾರತದ ವಿವಿಧ ಭಾಷೆಗಳ ಸಮಾನ ಪದಗಳನ್ನು ಗುರುತಿಸಿ, ಸಾಧ್ಯವಾದರೆ ಬಹುತೇಕ ಭಾಷೆಗಳಿಗೆ ಒಪ್ಪಿಗೆಯಾಗುವ ಅಖಿಲ ಭಾರತ (ಪ್ಯಾನ್-ಇಂಡಿಯನ್) ಪಾರಿಭಾಷಿಕ ಪದಗಳ ಪಟ್ಟಿಯ ನಿರ್ಮಾಣ ಮಾಡುವ ಕಾರ್ಯ ನಡೆದಿದೆ. ಇದು ಕೂಡ ನಮಗೆ ನೆರವಾಗಬಲ್ಲುದು.

ನಮ್ಮ ದೇಶದ ಅತ್ಯಂತ ಹಿರಿಯ ಹಾಗೂ ಪ್ರತಿಷ್ಠೆಯ ಬ್ಯಾಂಕಾದ ಭಾರತೀಯ ಸ್ಟೇಟ್ ಬ್ಯಾಂಕಿನ ಕರ್ನಾಟಕ ವಲಯದ ಶಾಖೆಗಳ ಕನ್ನಡಸಂಘಗಳ ಸಮನ್ವಯ ಸಮಿತಿಯ ಆಶ್ರಯದಲ್ಲಿ ಈ ದಿಸೆಯಲ್ಲಿ ಮಾಡಿರುವ ಕೆಲಸವನ್ನು ಇಲ್ಲಿ ಉಲ್ಲೇಖಿಸುವುದು ಅಪ್ರಕೃತವಾಗಲಾರದು. ಕನ್ನಡದಲ್ಲಿ ಬ್ಯಾಂಕ್ ವ್ಯವಹಾರಗಳನ್ನು ನಡಸುವುದರಲ್ಲೂ ಬ್ಯಾಂಕಿಂಗ್ ವಿಚಾರಗಳನ್ನು ಕುರಿತು ಕನ್ನಡದಲ್ಲಿ ಚಿಂತಿಸುವುದರಲ್ಲೂ ಅಭಿವ್ಯಕ್ತಿಸುವುದರಲ್ಲೂ ಆಸಕ್ತಿಯುಳ್ಳವರಿಗಾಗಿ ವರ್ಷಕ್ಕೆ ಎರಡು ಕಮ್ಮಟಗಳನ್ನು ನಡಸಲಾಗುತ್ತಿದೆ. ಪ್ರತಿಯೊಂದು ಕಮ್ಮಟದಲ್ಲೂ ಸುಮಾರು ಹದಿನೈದು ಮಂದಿ ಭಾಗಿಗಳು ಇರುತ್ತಾರೆ. ಬ್ಯಾಂಕಿಂಗ್ ಕುರಿತು ಪಾರಿಭಾಷಿಕ ಪದಗಳನ್ನು ಕನ್ನಡದಲ್ಲಿ ಟಂಕಿಸುವುದು ಅಥವಾ ರೂಪಿಸುವುದು, ಬ್ಯಾಂಕಿಂಗ್ ಪರಿಕಲ್ಪನೆಗಳನ್ನು ಕನ್ನಡದಲ್ಲಿ ವಿವರಿಸುವುದು, ಬ್ಯಾಂಕಿಂಗ್ ವಿಚಾರಗಳನ್ನು ಕುರಿತ ಪ್ರಬಂಧಗಳನ್ನು ಕನ್ನಡ ದಲ್ಲಿ ಬರೆಯುವುದು, ಇಂಗ್ಲಿಷ್ ಲೇಖನಗಳನ್ನು ಕನ್ನಡಕ್ಕೆ ಅನುವಾದಿಸುವುದು—ಈ ಕೆಲಸವನ್ನು ಈ ಕಮ್ಮಟಗಳಲ್ಲಿ ಹಮ್ಮಿಕೊಳ್ಳಲಾಗಿದೆ. ಭಾರತದ ಬೇರೆ ಯಾವ ಭಾಷೆಯಲ್ಲೂ ಸ್ವಯಂಪ್ರೇರಣೆಯಿಂದ ಇಂಥ ಕೆಲಸ ನಡೆಯುತ್ತಿಲ್ಲವೆಂದರೆ ತಪ್ಪಾಗದು. ಹಣ ಬ್ಯಾಂಕಿಂಗ್‌ಗಳಿಗೆ ಮಾಸಲಾದ 'ಬ್ಯಾಂಕಿಂಗ್ ಪ್ರಪಂಚ' ಎಂಬ ವಿದ್ವತ್ ಪತ್ರಿಕೆಯೊಂದು ಪ್ರಕಟವಾಗು ತ್ತಿದೆ. ಬೇರೆ ಯಾವ ಭಾರತೀಯ ಭಾಷೆಯಲ್ಲೂ ಇಂಥ ಪತ್ರಿಕೆಯೊಂದು ಪ್ರಕಟವಾಗುತ್ತಿಲ್ಲವೆಂದು ನನ್ನ ತಿಳಿವಳಿಕೆ. ಸಮನ್ವಯ ಸಮಿತಿಯ ಆಶ್ರಯದಲ್ಲಿ ಬ್ಯಾಂಕಿಂಗ್ ಕುರಿತ ಪಾರಿಭಾಷಿಕ ಪದಗಳ ಕೋಶ ಈಗಾಗಲೇ ತಯಾರಾಗಿ ಪುಸ್ತಕರೂಪದಲ್ಲಿ ಪ್ರಕಟಣೆಗೆ ಸಿದ್ಧವಾಗಿದೆ. 'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಈ ಪಾರಿಭಾಷಿಕ ಪದಗಳ ಪಟ್ಟಿಯೂ ಅರ್ಥ ವಿವರಣೆಯೂ ಅನುಕ್ರಮವಾಗಿ ಪ್ರಕಟವಾಗುತ್ತಿವೆ. ಬ್ಯಾಂಕುಗಳಲ್ಲಿ ಬಳಸಲಾಗುವ ಎಲ್ಲ ಮುಖ್ಯ ನಮೂನೆ ಗಳನ್ನೂ ಕನ್ನಡಕ್ಕೆ ತರಲಾಗಿದೆ. ಇವೂ ಪುಸ್ತಕರೂಪದಲ್ಲಿ ಪ್ರಕಟನೆಗೆ ಸಿದ್ಧವಾಗಿವೆ. ಇದುವರೆಗೆ ಮೈಸೂರು, ಶಿವನ ಸಮುದ್ರ, ಶಿರಸಿ ಹಾಗೂ ಹೊಸಪೇಟೆಯಲ್ಲಿ ಕಮ್ಮಟಗಳು ನಡೆದಿವೆ. ಐದನೆಯದು ಮೇ ತಿಂಗಳ ಕೊನೆಯ ವಾರದಲ್ಲಿ

ಮಡಿಕೇರಿಯಲ್ಲಿ ಸೇರಲಿದೆ. ಪ್ರತಿಯೊಂದು ಕಮ್ಮಟದ ಅವಧಿ ಆರು ದಿನಗಳು. ಕನ್ನಡದಲ್ಲಿ ಹಣ ಹಾಗೂ ಬ್ಯಾಂಕಿಂಗ್ ಕುರಿತು ಚಿಂತಿಸಬಲ್ಲ, ಬರೆಯಬಲ್ಲ ತರುಣರ ತಂಡವೊಂದು ತರಬೇತಾಗಿದೆ. ಯಾವುದೇ ಪ್ರಚಾರದಲ್ಲಿ ತೊಡಗದೆ ಗಟ್ಟಿಯಾದ ಅರ್ಥಪೂರ್ಣವಾದ ಕೆಲಸ ಮಾಡುವುದರಲ್ಲಿ ಈ ತರುಣರ ನಂಬಿಕೆ. ಬ್ಯಾಂಕುಗಳ ಉನ್ನತ ವ್ಯವಸ್ಥಾಪಕವರ್ಗದ ನಿರುತ್ತೇಜನದ ಎದುರಿನಲ್ಲೂ ಇಷ್ಟೊಂದು ಕೆಲಸ ನಡೆದಿದೆಯೆಂಬುದನ್ನು ನೆನಸಿಕೊಂಡಾಗ, ಕನ್ನಡದಲ್ಲಿ ಏನನ್ನಾದರೂ ಸಾಧಿಸಬಹುದು ಎಂಬ ನಂಬಿಕೆ ಮೂಡುತ್ತದೆ. ಇದೇ ಮಾದರಿಯ ಕಮ್ಮಟವೊಂದನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಶ್ರಯದಲ್ಲೂ ಕೆಲವು ತಿಂಗಳುಗಳ ಹಿಂದೆ ನಡಸಲಾಯಿತು, ಈ ಶಿಬಿರದ ಬಗ್ಗೆ ಬ್ಯಾಂಕುಗಳ ವ್ಯವಸ್ಥಾಪಕವರ್ಗದ ಆಸಕ್ತಿ ಮೂಡಿಸುವುದು ಕಷ್ಟವೇ ಆಯಿತು. ಈ ಶಿಬಿರದ ಭಾಗಿಗಳಲ್ಲಿ ಮೊದಮೊದಲು ಸಂದೇಹವೇ ಇದ್ದಾಗ್ಯೂ ಇದರ ಅನುಭವ ಪಡೆದ ಮೇಲೆ ಅವರಲ್ಲಿ ಮೂಡಿದ ಉತ್ಸಾಹ ಅಸಾಧಾರಣ. ರಾಜ್ಯ ಸರ್ಕಾರದ ಈ ಪ್ರಯತ್ನಕ್ಕೆ ಬ್ಯಾಂಕುಗಳ ವ್ಯವಸ್ಥಾಪಕ ವರ್ಗದಿಂದ ಇನ್ನಷ್ಟು ಬೆಂಬಲ ದೊರಕಿದರೆ ನಿಜಕ್ಕೂ ದೇಶವನ್ನು ಕಟ್ಟುವ ಕೆಲಸ ಸಾಧಿಸಿದಂತಾಗುತ್ತದೆ.

ಬ್ಯಾಂಕಿಂಗ್ ಕ್ಷೇತ್ರ ಇಂದು ಅಗಾಧವಾಗಿ ಬೆಳೆಯುತ್ತಿದೆ, ವೈವಿಧ್ಯಮಯವಾಗುತ್ತಿದೆ. ಭಾರತದಲ್ಲಿ ಮಾತ್ರವೇ ಅಲ್ಲ, ಪ್ರಪಂಚದಲ್ಲೇ ಹೊಸ ಹೊಸ ಸೇವೆಗಳೂ ಪರಿಕಲ್ಪನೆಗಳೂ ಪಾರಿಭಾಷಿಕ ಪದಗಳೂ ಹುಟ್ಟಿಕೊಳ್ಳುತ್ತಿವೆ. ಇವನ್ನೆಲ್ಲ ಕನ್ನಡದಲ್ಲಿ ಬಳಸುವುದೂ ಅಗತ್ಯವಾಗುತ್ತಿದೆ. ರಾಜ್ಯದಲ್ಲಿ ಎಲ್ಲ ಬ್ಯಾಂಕ್ ವ್ಯವಹಾರಗಳೂ ಕನ್ನಡದಲ್ಲೇ ನಡೆಯುವ ಕಾಲ ಬಂದಾಗ, ಈ ಹೊಸ ಸೇವೆಗಳನ್ನೂ ಪರಿಕಲ್ಪನೆಗಳನ್ನೂ ಕನ್ನಡದಲ್ಲಿ ವಿವರಿಸುವುದಾಗಲಿ, ಕನ್ನಡ ಪಾರಿಭಾಷಿಕ ಪದಗಳ ಸೃಷ್ಟಿಯಾಗಲಿ ಕಷ್ಟವೆನಿಸುವುದಿಲ್ಲ. ಕನ್ನಡದಲ್ಲಿ ಚಿಂತನೆ ನಡೆದಾಗ ಬರವಣಿಗೆ ಹಾಗೂ ಪಾರಿಭಾಷಿಕ ಪದಗಳ ಸೃಷ್ಟಿಗಳು ಸಹಜ ಪ್ರಕ್ರಿಯೆಗಳಾಗುತ್ತವೆ. ಇವು ಕೈಗಾರಿಕಾಕ್ಷೇತ್ರದ ತಂತ್ರಜ್ಞಾನವಿದ್ದಂತೆ. ಸಂಶೋಧನೆ ಪ್ರಯೋಗಗಳು ನಮ್ಮಲ್ಲೇ ನಡೆದಾಗ ತಂತ್ರಜ್ಞಾನ ತಾನಾಗಿಯೇ ವಿಕಾಸಹೊಂದುತ್ತದೆ. ಇವು ಇಲ್ಲದಾಗ ತಂತ್ರಜ್ಞಾನವನ್ನು ಅನ್ಯದೇಶಗಳಿಂದ ಆಮದು ಮಾಡಿಕೊಳ್ಳುತ್ತಲೇ ಇರಬೇಕಾಗುತ್ತದೆ. ಅದು ಎಂದೂ ನಮ್ಮದಾಗುವುದಿಲ್ಲ. ಪಾರಿಭಾಷಿಕ ಪದಗಳೂ ಹಾಗೆಯೇ. ನಮ್ಮ ಭಾಷೆಯಲ್ಲೆ ಚಿಂತನೆ, ವ್ಯವಹಾರ ನಡೆದಾಗ ಅಗತ್ಯಕ್ಕೆ ತಕ್ಕಂತೆ ಪಾರಿಭಾಷಿಕ ಪದಗಳು ತಾವಾಗಿಯೇ ಹುಟ್ಟಿಕೊಳ್ಳುತ್ತವೆ. ಎರವಲು ಅಥವಾ ಅನುವಾದ ಅಗತ್ಯವಾಗುವುದಿಲ್ಲ. ಬ್ಯಾಂಕಿಂಗ್ ಜೀವಂತವಾಗಿರಬೇಕಾದರೆ ಅದಕ್ಕೆ ಆಯಾ ಪ್ರದೇಶದ ಭಾಷೆಯ ನೀರು, ಗೊಬ್ಬರ ಎರೆಯುವುದು ಅಗತ್ಯ. ಇದನ್ನು ನಮ್ಮ ಬ್ಯಾಂಕಿಂಗ್ ಪ್ರಭೃತಿಗಳು ಅರಿಯುವುದು ಅನಿವಾರ್ಯ. ಈ ಅರಿವು ಎಷ್ಟು ಬೇಗ ಬಂದರೆ ಅಷ್ಟು ಒಳ್ಳೆಯದು. ಇಲ್ಲದಿದ್ದರೆ ಅದು ದೇಶದ ದೌರ್ಭಾಗ್ಯ.

ನಾನು ಈ ವಿಚಾರವನ್ನು ಇಷ್ಟೊಂದು ವಿಶದವಾಗಿ, ಇಷ್ಟೊಂದು ಭಾವಪರವಶತೆಯಿಂದ ಹೇಳುವುದಕ್ಕೆ ಕಾರಣವಿಲ್ಲದೆ ಇಲ್ಲ. ನಮ್ಮ ಬ್ಯಾಂಕುಗಳಲ್ಲಿರುವ ಉನ್ನತ ಅಧಿಕಾರಿಗಳ ಮನೋಧರ್ಮ ಬದಲಾಗಬೇಕೆಂಬುದು ನನ್ನ ಕಳಕಳಿ. ಕನ್ನಡದ ಮಾತು ಬಂದಾಗ ಇವರಲ್ಲಿ ಅನೇಕರು ಅದು ರಾಷ್ಟ್ರವಿರೋಧಿ ಎಂಬಂತೆ ನಡುಗುತ್ತಾರೆ. ರಾಷ್ಟ್ರದಲ್ಲಿರುವ ಭಾಷೆಗಳೆಲ್ಲ ರಾಷ್ಟ್ರಭಾಷೆಗಳೇ. ರಾಷ್ಟ್ರದ ಯಾವುದೇ ಭಾಷೆಯಲ್ಲಿ ಬರೆದರೂ ಅದನ್ನು ಮಾನ್ಯ ಮಾಡುವುದೇ ನಿಜವಾದ ರಾಷ್ಟ್ರೀಯ ಧೋರಣೆ. ಬ್ರಿಟಿಷ್ ಸಾಮ್ರಾಜ್ಯದ ಕಾಲದಲ್ಲಿ ನಮ್ಮ ಆಳರಸರು ಇಂಗ್ಲಿಷ್ ಬಿಟ್ಟು ಉಳಿದ ಭಾಷೆಗಳನ್ನು 'ವರ್ನಾಕ್ಯುಲರ್ಸ್' ಎಂದು ಜರಿಯುತ್ತಿದ್ದರು. ಆದಾಗ್ಯೂ ಆಡಳಿತಾನುಕೂಲತೆಯ ದೃಷ್ಟಿಯಿಂದ ವರ್ನಾಕ್ಯುಲರ್‌ಗಳಿಗೆ ಇಷ್ಟಷ್ಟು ಅವಕಾಶವಿರುತ್ತಿತ್ತು. ಇಂದು ಆ ಅವಕಾಶವೂ ಇಲ್ಲ, ತಾತ್ಸಾರವಂತೂ ಅತಿಯಾಗಿದೆ. ಹಿಂದಿ ಅಥವಾ ಇಂಗ್ಲಿಷ್ ಬಿಟ್ಟು ಬೇರೆ ಭಾಷೆಗಳನ್ನು ತಿರಸ್ಕಾರದಿಂದ ಕಾಣುವುದು ಅನೇಕರಿಗೆ ಮಾಮೂಲಾಗಿಹೋಗಿದೆ. ಸಂವಿಧಾನ ಏನು ಹೇಳುತ್ತದೆ, ಅಧಿಕೃತ ಭಾಷೆಗಳ ಅಧಿನಿಯಮದ ಆಶಯವೇನು ಎಂಬುದನ್ನು ಇವರು ಅರಿಯರು. ಮೇಲಿನಿಂದ ಬರುವ ಸುತ್ತೋಲೆಗಳ ಕಣ್ಣುಪಟ್ಟಿಯಿಂದಾಗಿ ಇವರಿಗೆ ದೃಷ್ಟಿಮಾಂದ್ಯ ಸಂಭವಿಸಿದೆ. ಕರ್ನಾಟಕವಿರಲಿ, ಅನ್ಯಭಾಷಾ ರಾಜ್ಯಗಳಲ್ಲಿ ಬ್ಯಾಂಕುಗಳು ಎಷ್ಟರಮಟ್ಟಿಗೆ ಸ್ಥಳೀಯ ಭಾಷೆಗಳನ್ನು ಬಳಸುತ್ತಿವೆಯೆಂಬುದನ್ನು ಕೂಡ ಇವರು ಯೋಚಿಸುವುದಿಲ್ಲ. ಕರ್ನಾಟಕದೊಳಗಿನ ಒಂದು ಬ್ಯಾಂಕಿಂಗ್ ಕಛೇರಿಯಿಂದ ಇನ್ನೊಂದು ಕಛೇರಿಯ ಮೇಲೆ ಬರೆಯಲಾದ ಬ್ಯಾಂಕ್ ಡ್ರಾಫ್ಟು ಕನ್ನಡದಲ್ಲಿದ್ದರೆ ಅದನ್ನು ಅನಾದರಿಸುವವರೆಗೆ ಕೆಲವರು ಹೋಗುತ್ತಾರೆ. ಕನ್ನಡಿಗರೇ ಇರುವ ಸ್ಥಳಗಳ ಬ್ಯಾಂಕುಗಳಲ್ಲಿ ತಮಿಳು ನಮೂನೆಗಳನ್ನು ಹಂಚುವವರ ಧಾರ್ಷ್ಟ್ಯವನ್ನು ಸಹಿಸುವುದು ಹೇಗೆ? ರಿಸರ್ವ್ ಬ್ಯಾಂಕಿನ ಮೇಲೆ ಸರ್ಕಾರ ಕನ್ನಡದಲ್ಲಿ ಬರೆದ ಚೆಕ್ಕನ್ನು ಅದೇಕೆ ಅನಾದರಿಸಬೇಕು ? ಭಾರತದ ಯಾವುದೇ ಭಾಷೆಯಲ್ಲಿ ಬರೆದ ಚೆಕ್ಕನ್ನು, ಡ್ರಾಫ್ಟನ್ನು ಆ ಭಾಷೆಯ ಪ್ರದೇಶದಲ್ಲಿ—ರಾಜ್ಯದಲ್ಲಿ—ಆದರಿಸುವುದರಲ್ಲೇನು ತಪ್ಪು ? ಚೆಕ್ಕು–ಡ್ರಾಫ್ಟುಗಳ ಬರಹ, ನೀಡಿಕೆ, ಪಾವತಿ, ವಸೂಲಿ ಇತ್ಯಾದಿ ವಿಚಾರಗಳಿಗೆ ಸಂಬಂಧಿಸಿದ ಕಾನೂನಾದ ಪರಕ್ರಾಮ್ಯ ಸಂಲೇಖಗಳ ಅಧಿನಿಯಮದಲ್ಲಿ (ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್) ಈ ಸಂಲೇಖಗಳು ಯಾವ ಭಾಷೆಯಲ್ಲಿರಬೇಕು, ಯಾವುದರಿಂದ ಬರೆಯಬೇಕು ಎಂಬಿವೇ ಮುಂತಾದ ಕಟ್ಟುಪಾಡುಗಳೇನನ್ನೂ ವಿಧಿಸಿಲ್ಲ. ಕಟ್ಟುಪಾಡುಗಳು ನಮ್ಮ ಅನುಕೂಲಕ್ಕಾಗಿ ; ತೊಂದರೆಗಾಗಿಯಲ್ಲ. ಕನ್ನಡದಲ್ಲಿ ಸಹಿಮಾಡಿದರೆಂದು ಬ್ಯಾಂಕಿನ ಅಧಿಕಾರಿಯೊಬ್ಬರಿಗೆ ಮೇಲಿನವರು ಎಚ್ಚರಿಕೆ ನೀಡಿದ್ದೂ, ಅವರ ಬಡತಿಯನ್ನು ತಡೆಹಿಡಿದಿದ್ದೂ ಉಂಟು. ಇದೆಲ್ಲಾ ಅಜ್ಞಾನದ, ಅರ್ಧಜ್ಞಾನದ ಪರಿಣಾಮ. ಅನೇಕ ಬ್ಯಾಂಕುಗಳಲ್ಲಿ ಅಧಿಕೃತ ಭಾಷಾ ವಿಭಾಗವಿದೆ. ಅಧಿಕೃತ ಭಾಷೆ

ಯೆಂದರೆ ಅವರ ದೃಷ್ಟಿಯಲ್ಲಿ ಹಿಂದಿಯೊಂದೇ! ಒಕ್ಕೂಟದ ಅಧಿಕೃತ ಭಾಷೆ ಹಿಂದಿಯೆಂಬುದು ಸರಿ. ಆದರೆ ಆಯಾ ರಾಜ್ಯಗಳ ಅಧಿಕೃತ ಭಾಷೆಗಳು ಎಲ್ಲಿ ಹೋಗಬೇಕು? ಅವುಗಳನ್ನು ಈ ಹಿಂದೆ ಹೇಳಿದ ವ್ಯಾಪ್ತಿಯಲ್ಲಿ ಬಳಸಲು ಅಗತ್ಯವಾದ ಕ್ರಮಗಳನ್ನು ತೆಗೆದುಕೊಳ್ಳಲು ಅಧಿಕೃತ ಭಾಷೆಗಳ ವಿಭಾಗವನ್ನು ವಿಸ್ತರಿಸಬೇಕು.

ಈ ವಿಚಾರದಲ್ಲಿ ಭಾರತೀಯ ಸ್ಟೇಟ್ ಬ್ಯಾಂಕು ಬಹಳ ವರ್ಷಗಳ ಹಿಂದೆಯೇ ಸ್ತುತ್ಯವಾದ ಕ್ರಮ ತೆಗೆದುಕೊಂಡಿತ್ತು. 1959ರಷ್ಟು ಹಿಂದೆಯೇ ಅದು ಪ್ರಾದೇಶಿಕ ಭಾಷೆಗಳನ್ನು ಬಳಸಲು ತೊಡಗಿತು. 1969ರಲ್ಲಿ ಈ ಬಗ್ಗೆ ವಿಧಿಬದ್ಧ ಯೋಜನೆಗಳು ಬಂದುವು. ಗ್ರಾಮಪ್ರದೇಶಗಳ ಕೆಲವು ಆಯ್ದ ಕಛೇರಿಗಳಲ್ಲಿ ಅದು ಪ್ರಾದೇಶಿಕ ಭಾಷೆಯನ್ನು ಬಳಸತೊಡಗಿತ್ತು. ಇತರ ಬ್ಯಾಂಕುಗಳೂ ಇಂಥ ಪ್ರಯತ್ನವನ್ನು ಮಾಡಿವೆ. ಭಾರತೀಯ ಸ್ಟೇಟ್ ಬ್ಯಾಂಕ್ ಕೂಡ ಅಧಿಕೃತ ಭಾಷೆಗಳ ಇಲಾಖೆಯನ್ನು ತೆರೆದಿದೆ. 'ಅಧಿಕೃತ ಭಾಷೆಗಳು' ಎಂಬ ಬಹುವಚನ ಪ್ರಯೋಗ ಗಮನಾರ್ಹ. ವಿವಿಧ ಪ್ರಾದೇಶಿಕ ಭಾಷೆಗಳ ಬಳಕೆಗೆ ಎರಡು ವರ್ಷಗಳ ಕಾಲಬದ್ಧ ಯೋಜನೆಯೊಂದನ್ನು ಅಂದು ಭಾರತೀಯ ಸ್ಟೇಟ್ ಬ್ಯಾಂಕು ಹಾಕಿಕೊಂಡಿತ್ತು. ಈ ಬಗ್ಗೆ ತರಬೇತಿ, ಪದಕೋಶಗಳ ಹಾಗೂ ನಮೂನೆಗಳ ರಚನೆ, ಎಲ್ಲಕ್ಕೂ ಕ್ರಮ ತೆಗೆದುಕೊಂಡಿತ್ತು. ಆದರೆ ಈಚೆಗೆ ಯಾವ ಪವಾಡವೋ ಏನೋ, ಹಿಂದಿಯೊಂದಕ್ಕೇ ಒತ್ತು ಬರುತ್ತಿದೆ. ಇಂಗ್ಲಿಷಿನಿಂದ ಪ್ರಾದೇಶಿಕ ಭಾಷೆಗಳಿಗೆ ಬದಲಾವಣೆ ಸುಸೂತ್ರವಾಗುವಂತೆ ಅಸ್ತಿಭಾರದ ರಚನೆಗೆ ಅದು ಹಾಕಿಕೊಂಡ ಕಾರ್ಯಕ್ರಮವನ್ನು ಈಗಿನವರು ಮರೆಯುತ್ತಿದ್ದಾರೆ. ಇದು ದುರ್ದೈವದ ಸಂಗತಿ.

ಪ್ರಾದೇಶಿಕ ಭಾಷೆಗಳನ್ನು ಬಳಸುವುದರಿಂದ ಬ್ಯಾಂಕುಗಳ ನಿರ್ವಹಣೆಗೆ ತೊಂದರೆಯಾಗುವುದೆಂಬ ಮಾತು ಅವೈಜ್ಞಾನಿಕ. ವಿಕೇಂದ್ರೀಕರಣವೇ ಪ್ರಜಾಸತ್ತೆಯ ಲಕ್ಷಣ. ಎಲ್ಲವನ್ನೂ ಕೇಂದ್ರೀಕರಿಸುವುದರಿಂದ ನಿಯಂತ್ರಣ ಕಠಿಣವಾಗುತ್ತದೆ. ವಂಚನೆ, ಹಣದ ದುರುಪಯೋಗ ಎಲ್ಲಕ್ಕೂ ಇದೂ ಕಾರಣ. ಬ್ಯಾಂಕು ನೌಕರರನ್ನು ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ವರ್ಗಾಯಿಸಿ, ಅಲ್ಲಿಯ ಭಾಷೆ ಬಾರದವರು ಆ ಸ್ಥಳಗಳಲ್ಲಿ ಕಾರ್ಯನಿರ್ವಹಣೆ ಮಾಡುವಂತಾದರೆ ಅದರಿಂದಾಗುವ ದುಷ್ಪರಿಣಾಮಗಳನ್ನು ಊಹಿಸಿಕೊಳ್ಳಬಹುದು. (ಕರ್ನಾಟಕದ ಪ್ರಮುಖ ಬ್ಯಾಂಕುಗಳಲ್ಲಿ ತಮಿಳರು ತುಂಬಿದ್ದಾರೆ.) ಬ್ಯಾಂಕುಗಳ ವಿಕೇಂದ್ರೀಕರಣದ ಪ್ರಯತ್ನ ನಡೆಯುವುದು ಅಗತ್ಯ. ಭಾರತೀಯ ಸ್ಟೇಟ್ ಬ್ಯಾಂಕ್ ಈ ನೀತಿಯನ್ನನುಸರಿಸುತ್ತಿರುವುದು ಗಮನಾರ್ಹ. ಅಂಥ ದೊಡ್ಡ ಬ್ಯಾಂಕೇ ಪ್ರಾದೇಶಿಕ ವಲಯಗಳನ್ನು ಸ್ಥಾಪಿಸಿ ಕಾರ್ಯ ನಡಸುತ್ತಿರುವಾಗ ಇತರ ಬ್ಯಾಂಕುಗಳು ಏಕೆ ಹಾಗೆ ಮಾಡಬಾರದು?

ಬ್ಯಾಂಕುಗಳು ಕನ್ನಡವನ್ನು ಹೆಚ್ಚುಹೆಚ್ಚಾಗಿ ಬಳಸುವಂತೆ ಮಾಡುವುದರಲ್ಲಿ ರಾಜ್ಯ ಸರ್ಕಾರದ ಹೊಣೆಯೂ ಬಹಳಷ್ಟು ಇದೆ. ಸಲಹೆ, ನೆರವು, ಕೆಲವೆಡೆಯಲ್ಲಿ ಕಾನೂನಿನ ಕ್ರಮ, ಒತ್ತಾಯ ಇವೆಲ್ಲವೂ ಅಗತ್ಯ. ಸರ್ಕಾರ ಅನೇಕ ವೇಳೆ ಉದಾಸೀನದ ನಿಲವು ತಳೆದಿರುವುದು ವಿಷಾದಕರ. ಬ್ಯಾಂಕೊಂದರಲ್ಲಿ ಸ್ಥಳೀಯ ಭಾಷೆಯನ್ನು ಬಳಸುವ ಪ್ರಶ್ನೆ ಬಂದಾಗ ಅದರ ವ್ಯವಸ್ಥಾಪಕರು ರಾಜ್ಯ ಸರ್ಕಾರಕ್ಕೆ ಪತ್ರ ಬರೆದು, ಈ ರಾಜ್ಯದ ಭಾಷೆ ಯಾವುದು ಎಂದು ಕೇಳಿದರಂತೆ. ಇಲ್ಲಿ ಯಾವುದೇ ಒಂದು ಭಾಷೆಯೂ ಇಲ್ಲವೆಂಬ ಅರ್ಥದಲ್ಲಿ ಸರ್ಕಾರ ಉತ್ತರ ಬರೆಯಿತಂತೆ. ಪತ್ರ ಬರೆದ ಬ್ಯಾಂಕಿನ ಉತ್ಸಾಹಿಗಳಿಗೆ ಹತಾಶೆಯಾಗಿರಬೇಕು. ಈ ಸಂಗತಿ ನಿಜವಿದ್ದರೆ ಖಂಡನಾರ್ಹ. ಸರ್ಕಾರ ಎಚ್ಚತ್ತುಕೊಳ್ಳಬೇಕು.

ಬ್ಯಾಂಕುಗಳಲ್ಲಿ ಕನ್ನಡ ಹೆಚ್ಚುಹೆಚ್ಚಾಗಿ ಬಳಕೆಗೆ ಬರಬೇಕು ಎಂದು ಕಾರ್ಯನಿರತರಾಗಿರುವವರಿಗೆ ಸರ್ಕಾರ ಹೆಚ್ಚಿನ ಬೆಂಬಲ ನೀಡಬೇಕು. ಬ್ಯಾಂಕ್ ಅಧಿಕಾರಿಗಳನ್ನು ಕರೆಯಿಸಿಕೊಂಡು ಅವರೊಂದಿಗೆ ಸಮಾಲೋಚಿಸಬೇಕು. ಕಾನೂನಿನ ತೊಡಕೇನಿದೆಯೆಂಬುದನ್ನು ಪರಿಶೀಲಿಸಬೇಕು. ಅನಾವಶ್ಯಕವಾದ ಗೊಂದಲವನ್ನು ಪರಿಹರಿಸಬೇಕು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಶ್ರಯದಲ್ಲಿ ನಡಸಿದ ಕನ್ನಡ ಬಳಕೆ ಕಾರ್ಯಶಿಬಿರದ ವಿಚಾರವನ್ನು ನಾನು ಹಿಂದೆ ಹೇಳಿದೆ. ಮತ್ತೆ ಅಂಥ ಶಿಬಿರ ನಡಸಬೇಕೆಂದು ಕನ್ನಡ ಸಂಸ್ಕೃತಿ ಇಲಾಖೆ ಯತ್ನ ನಡಸಿತು. ಆದರೆ ಶಿಬಿರ ಮತ್ತೆ ನಡೆಯಲಿಲ್ಲ. ಬ್ಯಾಂಕುಗಳಿಂದ ಸಾಕಷ್ಟು ಅನುಕೂಲಕರ ಪ್ರಕ್ರಿಯೆ ತೋರಿಬರಲಿಲ್ಲವೆಂಬ ಕಾರಣವನ್ನೇ ಒಡ್ಡಿ ಕೂರಲಾಗದು. ಕರ್ನಾಟಕದ ಬ್ಯಾಂಕುಗಳಲ್ಲಿ ಕನ್ನಡವನ್ನು ಬಳಸಬೇಕೆಂಬುದು ಕೇವಲ ಅಭಿಮಾನದ ಪ್ರಶ್ನೆಯಲ್ಲ, ಅನ್ಯ ಭಾಷಾದ್ವೇಷದ ಪ್ರಶ್ನೆಯೂ ಅಲ್ಲ. ಅದು ಅನುಕೂಲತೆಯ ಪ್ರಶ್ನೆ. ಜನಸಮೂಹದ ಸೇವಾ ಸಂಸ್ಥೆಗಳಾದ ಬ್ಯಾಂಕುಗಳು ಜನಸಮೂಹವನ್ನು ತಲಪುವಂತೆ ಮಾಡುವ ಪ್ರಶ್ನೆ. ಇದಕ್ಕೆ ಶ್ರದ್ಧೆ, ಉತ್ಸಾಹ, ಯೋಜನೆ, ದುಡಿಮೆ ಅಗತ್ಯ. ಕನ್ನಡಕ್ಕೇನಾದರೂ ಅನಾಹುತವಾಗುವುದಾದರೆ ಆಗ ಶತ್ರುವನ್ನು ಬಡಿದುಹಾಕೋಣ ಎಂದು ಕಣ್ಣು ಮುಚ್ಚಿ ಕೂರುವುದರಿಂದ ಪ್ರಯೋಜನವಿಲ್ಲ. ನಮ್ಮ ಪ್ರಯತ್ನ ಬರೀ ನೇತ್ಯಾತ್ಮಕವಾಗಿರಬಾರದು, ಇತ್ಯಾತ್ಮಕವಾಗಿರಬೇಕು, ರಚನಾತ್ಮಕವಾಗಿರಬೇಕು. ಕನ್ನಡಕ್ಕೆ, ಕನ್ನಡಿಗರಿಗೆ ಒದಗಿರುವ ನಿತ್ಯಗಂಡದ ನಿವಾರಣೆಯಾಗಬೇಕು. ಅಂಥ ಕಾಲ ಬೇಗ ಬರಲೆಂಬ ಹಾರೈಕೆ ನನ್ನದು.

---

# ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಗಣಕಗಳು*

**ಕೆ. ಆರ್. ಕಶ್ಯಪ್**

ಈ ಪ್ರಬಂಧದಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯ ಇಂದಿನ ಕೆಲವು ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಗಣಕ ಯಂತ್ರಗಳ ಪಾತ್ರವನ್ನು ವಿವರಿಸಲಾಗಿದೆ. ಬ್ಯಾಂಕುಗಳಲ್ಲಿ ಕೆಲಸ ಮಾಡುವವರಿಗೆ ಗಣಕಯಂತ್ರಗಳ ಬಗ್ಗೆ ವಿಭಿನ್ನ ಅಭಿಪ್ರಾಯಗಳಿವೆ. ಅವರಿಗೆ ಸರಿಯಾದ ಚಿತ್ರವನ್ನು ಕೊಡುವುದು ನನ್ನ ಈ ಪ್ರಬಂದಧ ಉದ್ದೇಶ.

**ಬ್ಯಾಂಕುಗಳಲ್ಲಿ ಗಣಕಗಳ ಅಗತ್ಯ**

ಭಾರತದಲ್ಲಿ ಕಳೆದ 15 ವರ್ಷಗಳಲ್ಲಿ ಬ್ಯಾಂಕಿಂಗ್ ರಂಗ ದಲ್ಲಿ ಅಗಾಧ ಪ್ರಗತಿ ಉಂಟಾಗಿದೆ. ಈ ವೇಳೆಯಲ್ಲಿ ಬ್ಯಾಂಕ್ ಶಾಖೆಗಳ ಸಂಖ್ಯೆ ಐದು ಪಟ್ಟು ಹೆಚ್ಚಿದರೆ ವಹಿವಾಟು (ಠೇವಣಿಗಳು ಮತ್ತು ಮುಂಗಡಗಳು) ಹತ್ತು ಪಟ್ಟು ಹೆಚ್ಚಿದೆ. ವಿವಿಧ ರಾಜ್ಯಗಳಲ್ಲಿ ಗ್ರಾಹಕರ ಸಂಖ್ಯೆ 15ರಿಂದ 20ರಷ್ಟು ಹೆಚ್ಚಿದೆ. ಯಾವುದೇ ರಂಗದಲ್ಲಿ ಇಷ್ಟೊಂದು ಪ್ರಗತಿ ಕಂಡುಬಂದರೆ ಕೆಲಸದ ರೀತಿಯಲ್ಲಿ ಕೆಲವು ಮೂಲ ಭೂತ ಬದಲಾವಣೆಗಳು ಆಗಬೇಕಾದ್ದು ಸ್ವಾಭಾವಿಕ. ಆದರೆ ಭಾರತೀಯ ಬ್ಯಾಂಕಿಂಗ್ ಪದ್ಧತಿಯಲ್ಲಿ ಹಾಗಾಗಿಲ್ಲ. ಬ್ಯಾಂಕ್ ಶಾಖೆಗಳಲ್ಲಿ 15 ವರ್ಷಗಳ ಹಿಂದೆ ನಡೆಯುತ್ತಿದ್ದ ರೀತಿಯಲ್ಲೇ ಇಂದೂ ಕೆಲಸ ನಡೆಯುತ್ತಿದೆ. ಇದೇ ರೀತಿ ಮುಂದುವರಿದರೆ ಇನ್ನು 15 ವರ್ಷಗಳಲ್ಲಿ ಏನಾಗಬಹುದು ಎಂದು ಊಹಿಸಿ ನೋಡಿ. ಮೇಲುನೋಟಕ್ಕೆ ಎಲ್ಲವೂ ಈಗ ಸರಿಯಾಗಿ ಕಾಣಬಹುದು. ಆದರೆ ಈ ಮುಂದಿನ ಅಂಕಿ ಅಂಶಗಳನ್ನು ಗಮನಿಸಿ :

(i) ಕಳೆದ ವರ್ಷ ಬ್ಯಾಂಕಿಂಗ್ ಉದ್ಯೋಗದಲ್ಲಿ ನಡೆದ ವಂಚನೆ ಪ್ರಕರಣಗಳಲ್ಲಿ ಸುಮಾರು ರೂ. 40 ಕೋಟಿ ನಷ್ಟ ಆಗಿದೆ. ಇದು ವರ್ಷೇ ವರ್ಷೇ ಅಧಿಕವಾಗುತ್ತಿದೆ. ಈ ಸಮಸ್ಯೆ ಉತ್ತಮ ಭದ್ರತಾವ್ಯವಸ್ಥೆಯಿಂದಾಗಲಿ ಮತ್ತಷ್ಟು ನಿರ್ಬಂಧಗಳಿಂದಾಗಲಿ ಬಗೆಹರಿಯುವುದಿಲ್ಲ. ಇದಕ್ಕೆ ಮುಖ್ಯ ಕಾರಣಗಳು:

ಅಂತರ ಶಾಖೆ ಮತ್ತು ಅಂತರ ಬ್ಯಾಂಕ್ ಲೆಕ್ಕಗಳ ಸಮನ್ವಯದಲ್ಲಿ ಆಗುತ್ತಿರುವ ಅಗಾಧವಿಳಂಬ—ವಿವಿಧ ಶಾಖೆಗಳ ಅಥವಾ ಬ್ಯಾಂಕ್‌ಗಳ ಮಧ್ಯೆ ಗ್ರಾಹಕರ ಬಗ್ಗೆ ಅಡ್ಡ ತಾಳೆ (ಕ್ರಾಸ್ ಚೆಕ್) ಇಲ್ಲದಿರುವುದು (ಇದರಿಂದ ಒಬ್ಬ ಗ್ರಾಹಕ ಹಲವಾರು ಬ್ಯಾಂಕ್‌ಗಳಿಂದ ಒಂದೇ ಕಾರಣಕ್ಕೆ ಹಣ ಪಡೆದು ವಂಚನೆ ಮಾಡಬಹುದು). ಒಂದೇ ಶಾಖೆಯ ವಿವಿಧ ವಿಭಾಗಗಳ ಮಧ್ಯೆ ಅಡ್ಡತಾಳೆ ಇಲ್ಲದಿರುವುದು (ದೊಡ್ಡ ಶಾಖೆಗಳಲ್ಲಿ ಇದರಿಂದ ಕೆಲವು ಸಮಸ್ಯೆಗಳು ತಲೆದೋರಬಹುದು). ಬ್ಯಾಂಕುಗಳಲ್ಲಿ ಕಂಡುಬರುವ ಈ ಕೆಲವು ನ್ಯೂನತೆಗಳನ್ನು ಚೆನ್ನಾಗಿ ಬಲ್ಲ ಗ್ರಾಹಕರು ಅಥವಾ ಬ್ಯಾಂಕ್ ಉದ್ಯೋಗಿಗಳು ವಂಚನೆ ಪ್ರಕರಣಗಳಲ್ಲಿ ಕೈಹಾಕುತ್ತಾರೆ. ಗ್ರಾಹಕರ ಮತ್ತು ಸರಕಾರದ ಹಣದ ಭದ್ರತೆ ಬ್ಯಾಂಕ್ ಉದ್ಯಮದ ಮುಖ್ಯ ಜವಾಬ್ದಾರಿಗಳಲ್ಲಿ ಒಂದು. ಇಂಥ ನ್ಯೂನತೆ ಗಳನ್ನು ಈಗಲೇ ತೆಗೆದುಹಾಕದಿದ್ದರೆ ಇನ್ನು 15–20 ವರ್ಷಗಳಲ್ಲಿ ಯಾವುದೇ ಕ್ರಮ ತೆಗೆದುಕೊಳ್ಳುವುದು ಬಹಳ ಕಷ್ಟ.

(ii) ಬ್ಯಾಂಕ್ ಉದ್ಯೋಗದಲ್ಲಿ ಈವರೆಗೆ ನೀಡಿರುವ ಸಾಲಗಳಲ್ಲಿ ತೊಡೆದುಹಾಕಿರುವ ಮೊಬಲಗು ಸುಮಾರು ರೂ. 1,500 ಕೋಟಿ ಇರಬಹುದೆಂಬುದು ಬಲ್ಲವರ ಅಂದಾಜು. ಸಾಲ ನೀಡುವುದು ಬ್ಯಾಂಕಿಂಗ್ ಉದ್ಯಮದ ಮುಖ್ಯ ಉದ್ದೇಶಗಳಲ್ಲಿ ಒಂದು. ಆದರೆ ಸರಿಯಾದ ಉದರಿ ನಿಯಂತ್ರಣ ಮತ್ತು ಮರುಪಾವತಿಗಳ ಉಸ್ತುವಾರಿ (ಕ್ರೆಡಿಟ್ ಕಂಟ್ರೋಲ್ ಅಂಡ್ ಮಾನಿಟರಿಂಗ್ ಆಫ್ ರೀ-ಪೇಮೆಂಟ್ಸ್) ಇಲ್ಲದಿದ್ದರೆ ಈ ಉದ್ದೇಶ ವ್ಯರ್ಥವಾಗುತ್ತದೆ. ಇಂದು ಬಿಗಿಯಾದ ಉದರಿ ನಿಯಂತ್ರಣ, ಸರಿಯಾದ ಮಾಹಿತಿ ಇಲ್ಲದ್ದರಿಂದಾಗಿ, ಬಹಳ ದುಬಾರಿಯದೂ ವಿಳಂಬ ಕಾರಿಯಾದ್ದೂ ಆಗಿದೆ.

(iii) ಇಂದು ಯಾವುದೇ ಬ್ಯಾಂಕ್ ಶಾಖೆಯಿಂದ ಅದರ ಪ್ರಧಾನ ಕಚೇರಿಗೆ ಮತ್ತು ಪ್ರಾಂತೀಯ ಅಥವಾ ವಿಭಾಗೀಯ ಕಚೇರಿಗೆ ವರ್ಷಕ್ಕೆ ಸುಮಾರು 1,200 ತಃಖ್ತೆ ಗಳನ್ನು (ಸ್ಟೇಟ್‌ಮೆಂಟ್ಸ್) ಕಳಿಸಲಾಗುತ್ತಿದೆ. ಈ ಕೆಲಸಕ್ಕೆ ಅಗಾಧ ಅಂಕಿಅಂಶಗಳನ್ನು ಲೆಕ್ಕಹಾಕಿ, ಪರಿಶೀಲಿಸಿ, ಅದನ್ನು

* ಸಮನ್ವಯ ಸಮಿತಿಯ ಆಶ್ರಯದಲ್ಲಿ ಬೆಂಗಳೂರಿನಲ್ಲಿ 1984ರ ಫೆಬ್ರುವರಿ 20ರಂದು ಏರ್ಪಡಿಸಲಾಗಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ

ಸರಿಯಾದ ರೀತಿಯಲ್ಲಿ ಪಟ್ಟಿ ಮಾಡುವುದು ಬಹಳ ಕಷ್ಟದ ಕೆಲಸ. ಇಂದು ಪ್ರಮುಖ ಬ್ಯಾಂಕುಗಳ ಎಲ್ಲ ಶಾಖೆಗಳ ಸಂಖ್ಯೆ ಸಾವಿರಗಳಲ್ಲಿವೆ. ಇವುಗಳ ಎಲ್ಲ ಮಾಹಿತಿಯ ಸಂಕಲನ (ಕಂಪೈಲೇಷನ್) ಪ್ರಧಾನ ಕಚೇರಿಗಳಲ್ಲಿ ಕೇಂದ್ರೀಕೃತವಾಗಿದೆ. ಯಾವುದೇ ಸಂಸ್ಥೆ ದೊಡ್ಡದಾಗುತ್ತಿದ್ದಂತೆ ಕೆಲಸಗಳನ್ನು ಪ್ರಾಂತೀಯ ಕಚೇರಿಗಳಿಗೆ ವಹಿಸಿಕೊಡುವುದು (ಡೆಲಿಗೇಷನ್) ಒಳ್ಳೆಯದು. ಪ್ರಧಾನ ಕಚೇರಿಯಲ್ಲಿ ಕೆಲಸ ಕೇವಲ ನೀತಿನಿರೂಪಣೆಗೆ (ಪಾಲಿಸಿ ಮೇಕಿಂಗ್) ಸಂಬಂಧಪಟ್ಟಿರಬೇಕು. ಆದರೆ ಈಗಿರುವ ವ್ಯವಸ್ಥೆಯಲ್ಲಿ ಹೀಗೆ ಮಾಡುವುದು ಬಹಳ ದುಬಾರಿ. ಕಳೆದ 15 ವರ್ಷಗಳಲ್ಲಿ ಬ್ಯಾಂಕುಗಳ ಆಡಳಿತಾತ್ಮಕ ಕೆಲಸದ ಹೊರೆ (ಅಡ್ಮಿನಿಸ್ಟ್ರೇಷನ್ ವರ್ಕ್‌ಲೋಡ್) ಬಹಳ ಹೆಚ್ಚಿದೆ. ಯಾವುದೇ ಸಂಸ್ಥೆ ದೊಡ್ಡದಾಗುತ್ತಿದ್ದಂತೆ ಸಂಯೋಜನೆಯ (ಕೋ-ಆರ್ಡಿನೇಷನ್) ಸಮಸ್ಯೆ ಹೆಚ್ಚಾಗುತ್ತದೆ. ಆಗ ಕೆಲಸದ ಪದ್ಧತಿಯನ್ನು ಬದಲಾಯಿಸಿಕೊಳ್ಳದಿದ್ದರೆ ವ್ಯವಸ್ಥೆ ಕುಸಿದು ಬೀಳಬಹುದು. ಆದ್ದರಿಂದ ಬ್ಯಾಂಕುಗಳಲ್ಲಿ ವ್ಯವಸ್ಥೆ ಕುಸಿದು ಬೀಳುವ ಮುನ್ನವೇ ಆಧುನೀಕರಣವನ್ನು ಆದಷ್ಟು ಬೇಗ ಪ್ರಾರಂಭಿಸುವುದು ಒಳ್ಳೆಯದು. ಈ ಆಧುನೀಕರಣದಲ್ಲಿ ಗಣಕಯಂತ್ರಗಳು ಮಹತ್ತರ ಪಾತ್ರ ವಹಿಸುತ್ತವೆ.

**ಬ್ಯಾಂಕುಗಳಿಗೆ ಗಣಕಯಂತ್ರಗಳಿಂದ ಏನು ಪ್ರಯೋಜನ?** ಗಣಕಯಂತ್ರ ಈ ಕೆಲಸಗಳನ್ನು ಮಾನವನಿಗಿಂತ ಹಲವಾರು ಪಟ್ಟು ವೇಗವಾಗಿ ಮಾಡಬಲ್ಲದು.

(i) **ಲೆಕ್ಕಾಚಾರ ಮತ್ತು ಲೆಕ್ಕಪತ್ರಗಳ ನಿರ್ವಹಣೆ:** ಲೆಕ್ಕಾಚಾರವನ್ನು ಲೆಕ್ಕ ಗುಣಕಾರಿ (ಕ್ಯಾಲ್ಕುಲೇಟರ್) ಕೂಡ ಬೇಗ ಮಾಡಬಲ್ಲದು. ಆದರೆ ಗಣಕಯಂತ್ರ ಲೆಕ್ಕಾಚಾರ ಮಾಡುವುದಷ್ಟೇ ಅಲ್ಲ, ಅಂಕಿ ಅಂಶಗಳನ್ನು ಸಂಬಂಧಪಟ್ಟ ಲೆಕ್ಕ ಪುಸ್ತಕಗಳಿಗೆ ವರ್ಗಾವಣೆ (ಪೋಸ್ಟಿಂಗ್) ಕೂಡ ಮಾಡುತ್ತದೆ. ಆದ್ದರಿಂದ ನಮೂದಿನ ತಪ್ಪುಗಳು (ಪೋಸ್ಟಿಂಗ್ ಎರರ್ಸ್) ಆಗುವುದು ಕಡಿಮೆ. ಇದರಿಂದ ನಿಷ್ಕೃಷ್ಟತೆ ಬಹಳ ಹೆಚ್ಚುತ್ತದೆ.

(ii) **ಲೆಕ್ಕಗಳ ಸಮನ್ವಯ** (ರೆಕನ್ಸಿಲಿಯೇಷನ್) : ಈ ಕೆಲಸದಲ್ಲಿ ಹಲವಾರು ಅಂಕಿ ಅಂಶಗಳನ್ನು ಪರಿಶೀಲಿಸಿ. ವಿಂಗಡಣೆ ಮಾಡಿ (ಸಾರ್ಟಿಂಗ್) ಸರಿಯಾದುದನ್ನು ತೆಗೆಯಬೇಕು. ಈ ಕೆಲಸವನ್ನು ಗಣಕ ಬಹಳ ಬೇಗ ಮಾಡಬಲ್ಲುದು. ಈಗಿರುವ ಹಲವಾರು ಸಮಸ್ಯೆಗಳಿಗೆ ಈ ಕೆಲಸಗಳಲ್ಲಿ ಆಗುತ್ತಿರುವ ವಿಳಂಬವೇ ಕಾರಣ. ಈ ವಿಳಂಬ ಗಣಕಗಳ ಉಪಯೋಗದಿಂದ ಬಹಳಷ್ಟು ಕಡಿಮೆಯಾಗುತ್ತದೆ. ಇದರಿಂದ ಕರಾರುವಾಕ್ಕಾದ ಅಧುನೀತ (ಅಪ್‌ಟುಡೇಟ್) ಲೆಕ್ಕ ಪುಸ್ತಕಗಳನ್ನು ಇಡುವುದು ಸಾಧ್ಯ.

(iii) **ಮಾಹಿತಿ ಶೇಖರಣೆ ಮತ್ತು ಶೋಧನೋದ್ಧರಣೆ** (ಸ್ಟೋರೇಜ್ ಅಂಡ್ ರಿಟ್ರೀವಲ್) : ಸಾಲ ನೀಡುವಾಗ ಗ್ರಾಹಕರ ಬಗ್ಗೆ ಎಲ್ಲ ರೀತಿಯ ಹಳೆಯ ಮಾಹಿತಿಯನ್ನು ಪರಿಶೀಲಿಸಬೇಕಾಗುತ್ತದೆ. ಗಣಕಯಂತ್ರದಿಂದ ಈ ಕೆಲಸವನ್ನು ಬಹಳ ಸುಲಭವಾಗಿ ಮಾಡಬಹುದು. ಎಲ್ಲ ರೀತಿಯಲ್ಲೂ ಅಡ್ಡತಾಳೆ ನೋಡುವುದರಿಂದಾಗಿ ಉತ್ತಮ ಉದರಿ ನಿಯಂತ್ರಣ ಸಾಧ್ಯ. ಕೆಲವು ಬಾರಿ ಒಂದು ಶಾಖೆಯಲ್ಲಿ ಶೇಖರಿಸಲಾದ ಮಾಹಿತಿಯನ್ನು ಇತರ ಶಾಖೆಗಳು ಉಪಯೋಗಿಸಬೇಕಾಗುತ್ತದೆ. ಗಣಕಗಳಲ್ಲಿ ಈ ಬಗೆಯ ಮಾಹಿತಿ ವರ್ಗಾವಣೆಯನ್ನು ಕಡಿಮೆ ಖರ್ಚಿನಲ್ಲಿ ಮಾಡಬಹುದು. ಇದರಿಂದ ವ್ಯರ್ಥವಾಗಿ ಎರಡು ಕಡೆ ಒಂದೇ ಕೆಲಸ ನಡೆಯುವುದು ತಪ್ಪಿ ಸಮನ್ವಯ ಉತ್ತಮವಾಗುತ್ತದೆ.

(iv) **ವರದಿಗಳ ತಯಾರಿಕೆ :** ಗಣಕಗಳನ್ನು ಕ್ರಮವಿಧೀಕರಿಸುವುದರಿಂದ (ಪ್ರೋಗ್ರಾಮ್) ನಮಗೆ ಬೇಕಾದ ರೀತಿಯಲ್ಲಿ ವಿಶ್ಲೇಷಣೆ (ಅನಾಲಿಸಿಸ್) ನಡೆಸುವುದು ಸಾಧ್ಯ. ಇಂದು ಬಗೆಬಗೆಯ ವರದಿಗಳನ್ನು ತಯಾರಿಸುವುದರಲ್ಲಿ ಲೆಕ್ಕಾಚಾರ ಮಾಡುವುದಕ್ಕಿಂತ ಅಂಕಿ ಅಂಶಗಳನ್ನು ಬೇಕಾದ ನಮೂನೆಯಲ್ಲಿ ಪಟ್ಟಿ ಮಾಡುವುದು ಕಷ್ಟ. ಗಣಕದಿಂದ ಇದನ್ನು ಬಹಳ ಬೇಗ ಮಾಡಬಹುದು. ಉದಾಹರಣೆಗೆ ಬ್ಯಾಂಕುಗಳು ತಯಾರಿಸುವ ಮೂಲ ಅಂಕಿ ಅಂಶಗಳ ವರದಿಗಳು (ಬೇಸಿಕ್ ಸ್ಟ್ಯಾಟಿಸ್ಟಿಕಲ್ ರಿಟರ್ನ್ಸ್—ಬಿಎಸ್‌ಆರ್) ಮತ್ತು ವಿವಿಧ ಬಗೆಯ ಸಾಲಗಳ ಬಗ್ಗೆ ಶಾಖಾ ವರದಿಗಳು (ಬ್ರ್ಯಾಂಚ್ ರಿಟರ್ನ್ಸ್).

(v) **ದಿನವಹಿ ಪತ್ರವ್ಯವಹಾರ** (ರೊಟೀನ್ ಕರೆಸ್ಪಾಂಡೆನ್ಸ್): ಯಾವುದೇ ವರದಿ ಬಂದರೂ ಅದರ ಉದ್ದೇಶ ಕೆಲವು ನಿರ್ಧಾರಗಳನ್ನು ಕಾರ್ಯರೂಪಕ್ಕೆ ತರುವುದು. ಇದಕ್ಕಾಗಿ ಪತ್ರವ್ಯವಹಾರ ಇರುತ್ತದೆ. ಆದರೆ ಪತ್ರ ತಡವಾಗಿ ತಲುಪಿದರೆ ಅದರ ಮಾಹಿತಿಯ ಮಹತ್ವ ನಷ್ಟವಾಗಬಹುದು. ಗಣಕದಲ್ಲಿ ವರದಿಗಳಿಗೆ ಹೊಂದಿಕೊಂಡಂತೆ ಪತ್ರವ್ಯವಹಾರ ಮಾಡುವುದೇ ಅಲ್ಲ, ಅದನ್ನು ಅನುಸರಿಸಿ ನಡೆಯಬಹುದು (ಫಾಲೋಅಪ್). ಇದರಿಂದ ಹಲವು ಕಡೆ ವಿಳಂಬವಾಗುವುದನ್ನು ತಪ್ಪಿಸಬಹುದು.

(vi) **ಮಾಹಿತಿ ಪೂರೈಕೆ** (ಇನ್‌ಫರ್ಮೇಷನ್ ಸಿಸ್ಟೆಮ್): ಗಣಕದ ಉಪಯೋಗದ ಉದ್ದೇಶ ಬರೀ ಖರ್ಚು ಕಡಿಮೆ ಮಾಡುವುದು ಮಾತ್ರವಲ್ಲ. ಆಗುವ ಕೆಲಸಗಳ ದಕ್ಷತೆ ಹೆಚ್ಚಿಸುವುದು. ಇಂದು ಬ್ಯಾಂಕ್ ಅಧಿಕಾರವರ್ಗವಾಗಲಿ, ಸರಕಾರವಾಗಲಿ, ಏನಾದರೂ ಮಾಹಿತಿ ಕೇಳಿದರೆ ಅದನ್ನು ಸರಿಯಾದ ಸಮಯಕ್ಕೆ ಕರಾರುವಾಕ್ಕಾಗಿ ಒದಗಿಸುವುದು ಕಷ್ಟ ಮತ್ತು ದುಬಾರಿವೆಚ್ಚದ್ದು. ಆದ್ದರಿಂದ ತಡವಾಗಿ ಬಂದ ಮಾಹಿತಿ ಅಥವಾ ತಪ್ಪಾದ ಮಾಹಿತಿ ಕೊಡುವುದಕ್ಕಿಂತ ಮಾಹಿತಿ ಕೊಡದಿರುವುದೇ ಮೇಲು ಎಂದು ಹಲವು ಬಾರಿ ಸುಮ್ಮನಿರಬೇಕಾಗುತ್ತದೆ. ಗಣಕದಿಂದ ಸರಿಯಾದ ಮಾಹಿತಿಯನ್ನು ಸರಿಯಾದ ಸಮಯಕ್ಕೆ ಸರಿಯಾದ ಜಾಗದಲ್ಲಿ ಒದಗಿಸುವುದು ಸಾಧ್ಯ. ಇದರಿಂದ ನಿರ್ಧಾರಗಳನ್ನು ಕಾರ್ಯರೂಪಕ್ಕೆ ತರುವುದರಲ್ಲಿ ದಕ್ಷತೆ ಹೆಚ್ಚುತ್ತದೆ.

ಮೇಲ್ಕಂಡ ವಿವರಣೆಯಿಂದ ಬ್ಯಾಂಕುಗಳಿಗೆ ಇಂದಲ್ಲ ನಾಳೆ ಗಣಕ ಅತ್ಯಾವಶ್ಯಕ ಎಂದು ವೇದ್ಯವಾಗುತ್ತದೆ. ಬ್ಯಾಂಕು

ಗಳ ಎಲ್ಲ ಕಾರ್ಯಕ್ಷೇತ್ರಗಳಲ್ಲಿ ಗಣಕ ಒಳ್ಳೆಯ ಬದಲಾವಣೆಯನ್ನು ತರಬಲ್ಲದು. ಅದರ ಬಳಕೆಯನ್ನು ಆದಷ್ಟು ಬೇಗ ಪ್ರಾರಂಭಿಸುವುದು ಒಳ್ಳೆಯದು. ಆದರೆ ಅದನ್ನು ಹಂತ ಹಂತವಾಗಿ ಬಳಸಿದರೆ ಪರಿಣಾಮಗಳು ಇನ್ನೂ ಚೆನ್ನಾಗಿರುತ್ತವೆ. ಏಕೆಂದರೆ ಇಂದಿನ ಕೈದುಡಿಮೆ ವ್ಯವಸ್ಥೆಗಿಂತ ಗಣಕದ ವ್ಯವಸ್ಥೆ ಭಿನ್ನವಾದುದು. ಇದರಿಂದ ಕೆಲಸದ ರೀತಿಯಲ್ಲಿ ಬಹಳಷ್ಟು ಬದಲಾವಣೆ ತರಬೇಕಾಗುತ್ತದೆ. ಬದಲಾವಣೆಯನ್ನು ಕ್ರಮೇಣ ತಂದರೆ ಸಂಬಂಧಪಟ್ಟವರು ಹೊಂದಿಕೊಳ್ಳುವುದು ಸುಲಭ. ಈ ಬದಲಾವಣೆಯನ್ನು ಬ್ಯಾಂಕಿಂಗ್ ವ್ಯವಸ್ಥೆಯ ಎಲ್ಲ ಕಛೇರಿಗಳಲ್ಲೂ ಪ್ರಾರಂಭಿಸುವುದು ಒಳ್ಳೆಯದು. ಗಣಕದ ಉಪಯೋಗವನ್ನು ಮೊದಲು ಪ್ರಧಾನ ಕಛೇರಿಯಲ್ಲಿ ಮಾಡಿ ಅನಂತರ ಶಾಖೆಗಳಲ್ಲಿ ಬಳಸಬಹುದು. ಆದರೆ ಇದಕ್ಕಿಂತ ಎಲ್ಲ ಕಛೇರಿಗಳಲ್ಲೂ (ಶಾಖೆ, ಪ್ರಾಂತೀಯ ಕಛೇರಿ ಮತ್ತು ಪ್ರಧಾನ ಕಛೇರಿ) ಗಣಕದ ಬಳಕೆ ಒಮ್ಮೆಲೇ ಪ್ರಾರಂಭಿಸಿ ಹಂತಹಂತವಾಗಿ ಎಲ್ಲ ಕಾರ್ಯಕ್ಷೇತ್ರಗಳಿಗೂ ವಿಸ್ತರಿಸುವುದು ಉತ್ತಮ.

### ಗಣಕಗಳಿಂದ ನಿರುದ್ಯೋಗ ಉಂಟಾಗುವುದೆ ?

ಇದು ಈಗ ಬಹಳ ಬಗೆಯಾಗಿ ಚರ್ಚಿಸಲ್ಪಡುತ್ತಿರುವ ವಿಚಾರ. ವಾಸ್ತವವಾಗಿ ಗಣಕಗಳಿಂದ ಶ್ರಮದ ಉಚ್ಚಾಟನೆ ಆಗುವುದಿಲ್ಲ. ಆದರೆ ಒಂದು ಬಗೆಯ ಶ್ರಮದಿಂದ ಇನ್ನೊಂದು ಬಗೆಯ ಶ್ರಮಕ್ಕೆ ವರ್ಗಾವಣೆ ಉಂಟಾಗುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ನಡೆದ ಸರ್ವೇಕ್ಷಣ ಒಂದರ ಪ್ರಕಾರ ಗಣಕದಿಂದ ಕೆಲಸಗಳ ಅವಕಾಶಗಳು ಕಡಿಮೆಯಾಗುವುದಿಲ್ಲ, ಆದರೆ ಹೆಚ್ಚಾಗುತ್ತವೆ. ಏಕೆಂದರೆ ಗಣಕ ಸ್ವಂತ ಬುದ್ಧಿಯಿಲ್ಲದ ಮೂಕಯಂತ್ರ. ಹೇಳಿದ ಹಾಗೆ ಅದು ಕೆಲಸ ಮಾಡುತ್ತದೆ. ಅದನ್ನು ಸರಿಯಾಗಿ ಉಪಯೋಗಿಸಲು ಬಹಳ ಮಂದಿ ಚಾಲಕರ ಮತ್ತು ಕ್ರಮವಿಧಾಯಕರ (ಪ್ರೋಗ್ರಾಮರ್) ಅಗತ್ಯವಿದೆ.

ಗಣಕಕ್ಕೆ ತಪ್ಪು ಮಾಹಿತಿ ನೀಡಿದರೆ ಅದರಿಂದ ತಪ್ಪು ಅಂಕಿ ಅಂಶಗಳು ಹೊರಬೀಳುತ್ತವೆ. ಆದ್ದರಿಂದ ಮಾಹಿತಿಯ ನಿಖರತೆಯನ್ನು ಪೂರ್ಣವಾಗಿ ಪರಿಶೀಲಿಸುವುದು ಅಗತ್ಯ. ಮಾಹಿತಿ ಸರಿಯಾಗಿದ್ದರೂ ಅದನ್ನು ಬೆರಳಚ್ಚು ಯಂತ್ರದ ಮಾದರಿಯ ಕೀಬೋರ್ಡ್‌ನಿಂದ ಗಣಕಕ್ಕೆ ನೀಡುವಾಗ ತಪ್ಪು ಆಗಬಹುದು. ಆದ್ದರಿಂದ ನುರಿತ ಚಾಲಕರ ಅಗತ್ಯವಿದೆ. ಈ ಕೆಲಸವನ್ನು ಅನುಭವಿ ಬ್ಯಾಂಕ್ ಉದ್ಯೋಗಿಗಳು ಮಾಡುವುದರಿಂದ ಉತ್ತಮ ನಿಖರತೆಯನ್ನು ಉಳಿಸಿಕೊಳ್ಳಬಹುದು.

ಗಣಕದಿಂದ ಮಾಹಿತಿ ಪಡೆಯಲು ಅದನ್ನು ಕ್ರಮವಿಧಿ ನೀಡಬೇಕು. ಇದರಲ್ಲಿ ಚಿಕ್ಕ ಮಕ್ಕಳಿಗೆ ಹೇಳಿಕೊಡುವಂತೆ ಸಣ್ಣ ಪುಟ್ಟ ವಿಷಯಗಳನ್ನೂ ವಿವರವಾಗಿ ತಿಳಿಸಬೇಕು. ಕ್ರಮ ವಿಧೀಕರಣ(ಪ್ರೋಗ್ರಾಮಿಂಗ್)ವಾಸ್ತವವಾಗಿ ತರ್ಜುಮೆಯ ಕೆಲಸವಾದರೂ (ಟ್ರಾನ್ಸ್‌ಲೇಷನ್) ನಾವು ಅನುಸರಿಸುವ ಕಾರ್ಯಪದ್ಧತಿಗೆ ತಕ್ಕಂತೆ ಗಣಕಕ್ಕೆ ಅರ್ಥವಾಗುವ ಭಾಷೆಯಲ್ಲಿ ಹಂತಹಂತವಾಗಿ ಬರೆಯಬೇಕು. ಆದ್ದರಿಂದ ಕ್ರಮ ವಿಧಾಯಕರುಗಳಿಗೆ ಕೇವಲ ಗಣಕದ ಕ್ರಮವಿಧಿಯ ಭಾಷೆ (ಪ್ರೋಗ್ರಾಮಿಂಗ್ ಲಾಂಗ್ವೇಜ್)ತಿಳಿದರೆ ಸಾಲದು. ಬ್ಯಾಂಕುಗಳಲ್ಲಿ ಇರುವ ಅನೇಕ ಕ್ಲಿಷ್ಟ ನಿಬಂಧನೆಗಳು ಮತ್ತು ಕಾರ್ಯ ವಿಧಾನಗಳನ್ನೂ ಅರ್ಥಮಾಡಿಕೊಂಡಿರಬೇಕು. ಆದ್ದರಿಂದ ಈ ಕೆಲಸಗಳಿಗೆ ಹೊಸಬರನ್ನು ತೆಗೆದುಕೊಳ್ಳಲು ಆಗುವುದಿಲ್ಲ. ಬ್ಯಾಂಕ್ ಉದ್ಯೋಗಿಗಳಿಗೆ ಸರಿಯಾದ ತರಬೇತಿ ನೀಡಿ ಇಂಥ ಕೆಲಸಗಳನ್ನು ಮಾಡಿಸಿಕೊಳ್ಳಬೇಕು.

ಗಣಕವನ್ನು ಉಪಯೋಗಿಸುತ್ತಿದ್ದಂತೆ ಇರುವ ಮಾಹಿತಿಯ ಬಗ್ಗೆ ಜಾಗೃತಿ ಮತ್ತು ಅದರ ಸದುಪಯೋಗದ ಸಂಸ್ಕೃತಿ(ಕಲ್ಚರ್) ಮೂಡುತ್ತದೆ. ಇದರಿಂದ ಮುಂಚೆ ಮಾಡಲಾಗದ ಅನೇಕ ಕೆಲಸಗಳನ್ನು ಮಾಡಬಹುದು. ಹೀಗೆ ಕೆಲಸಗಳ ಅವಕಾಶ ವಾಸ್ತವವಾಗಿ ಹೆಚ್ಚುತ್ತದೆ. ಈಗ ಹಲವಾರು ಬ್ಯಾಂಕುಗಳಲ್ಲಿ ಹೊರಗಿನ ಗಣಕಗಳನ್ನು ಉಪಯೋಗಿಸಲಾಗುತ್ತಿದೆ. ಈ ಬಾಡಿಗೆ ಪದ್ಧತಿಯಲ್ಲಿ ಬ್ಯಾಂಕುಗಳು ಮೂಲ ಮಾಹಿತಿ ನೀಡಿ ಅನಂತರ ಸಂಬಂಧಪಟ್ಟ ಅಂಕಿ ಅಂಶಗಳನ್ನು ತರಿಸಿಕೊಳ್ಳುತ್ತಿವೆ. ಈ ಪದ್ಧತಿ ಅಂತಿಮವಾಗಿ ಬಹಳ ದುಬಾರಿ. ಅಲ್ಲದೆ ಇಲ್ಲಿ ಬ್ಯಾಂಕಿನೊಳಗೆ ನಡೆಯಬಹುದಾದ ಕೆಲಸಗಳನ್ನು ಹೊರಗಿನ ಸಂಸ್ಥೆಗಳು ನಡೆಸಿಕೊಡುತ್ತಿವೆ. ಇದು ಮುಂದುವರಿದರೆ ಕ್ರಮೇಣ ಬ್ಯಾಂಕುಗಳ ಒಳಗೆ ಕೆಲಸಗಳು ಕಡಿಮೆಯಾಗಬಹುದು. ಅದರ ಬದಲು ಬ್ಯಾಂಕುಗಳು ತಮ್ಮವೇ ಆದ ಗಣಕಗಳನ್ನು ಅಳವಡಿಸಿಕೊಂಡರೆ ಒಳಗಿನ ಕೆಲಸದ ಅವಕಾಶಗಳು ಕಡಿಮೆಯಾಗುವ ಬದಲು ಹೆಚ್ಚಾಗುತ್ತವೆ. ಅಲ್ಲದೆ ಮುಂದೆ 15–20 ವರ್ಷಗಳ ಅನಂತರ ಬ್ಯಾಂಕುಗಳು ಎಲ್ಲ ಕೆಲಸಗಳಿಗೂ ಗಣಕಗಳ ಉಪಯೋಗ ಮಾಡುವ ಪದ್ಧತಿ ಬರಬಹುದು. ಸ್ವಂತ ಗಣಕ ಇದ್ದರೆ ಈ ಪರಿಸ್ಥಿತಿಗೆ ಹೊಂದಿಸಿಕೊಳ್ಳುವುದು ಸುಲಭ.

### ಬ್ಯಾಂಕುಗಳಲ್ಲಿ ಗಣಕಗಳ ಆಯ್ಕೆ

ಗಣಕದ ಉಪಯೋಗ ಯಶಸ್ವಿಯಾಗಬೇಕಾದರೆ ಎಲ್ಲ ಉದ್ಯೋಗಿಗಳೂ ಅದರ ಬಳಕೆಯನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಬೇಕು. ಇದಕ್ಕೆ ಸರಿಯಾದ ತರಬೇತಿ ಅಗತ್ಯ. ವಿದೇಶೀ ಗಣಕಗಳ ತಯಾರಕರು ಇಂಥ ತರಬೇತಿ ನೀಡಲಾರರು. ಆದ್ದರಿಂದ ಭಾರತದಲ್ಲಿ ತಯಾರಾಗುವ ಗಣಕಗಳನ್ನುಕೊಳ್ಳುವುದೇ ಉತ್ತಮ. ಇದರಿಂದ ಅಮೂಲ್ಯವಾದ ವಿದೇಶೀ ವಿನಿಮಯ ಕೂಡ ಉಳಿಯುತ್ತದೆ. ಬ್ಯಾಂಕ್ ಉದ್ಯೋಗಿಗಳ ದೃಷ್ಟಿಯಿಂದ ಗಣಕಗಳ ಆಯ್ಕೆಯಲ್ಲಿ ತಾಂತ್ರಿಕ ಕಾರಣಗಳು ಮತ್ತು ಬೆಲೆಯ ಜೊತೆಯಲ್ಲಿ ಈ ಮುಂದಿನ ಗುಣಗಳನ್ನು ಪರಿಶೀಲಿಸುವುದು ಮುಖ್ಯ :

(i) ಉಪಯೋಗಿಸಲು ಸರಳವಾಗಿರಬೇಕು.

(ii) ತರಬೇತಿ ನೀಡಲು ಬಹಳ ಕಡಿಮೆ ಸಮಯ ಬೇಕಾಗುವಂತಿರಬೇಕು.

(iii) ತರಬೇತಿಯನ್ನು ತಯಾರಕರೇ ತಮ್ಮ ಯಂತ್ರಗಳ ಮೇಲೆ ನೀಡಬೇಕು.

(iv) ಖರೀದಿಯ ಅನಂತರದ ಸೇವೆ ಮತ್ತು ಉಸ್ತುವಾರಿ ಬೇಕಾದಾಗ ತಕ್ಷಣ ಸಿಗುವಂತಿರಬೇಕು.

(v) ಗಣಕಯಂತ್ರದ ಮಾದರಿ ಮತ್ತು ಕ್ರಮವಿಧಿಗಳು ಈ ಮುಂಚೆ ಹಲವಾರು ಸಂಸ್ಥೆಗಳಲ್ಲಿ ಬಳಕೆಗೆ ಬಂದು ಖಾತರಿಯಾಗಿರಬೇಕು.

ಭಾರತದಲ್ಲಿ ಈಗ ಗಣಕಗಳ ತಯಾರಕರು ಅನೇಕರಿದ್ದಾರೆ. ಸಂಪೂರ್ಣವಾಗಿ ಭಾರತದಲ್ಲೇ ತಯಾರಾದ ಯಂತ್ರಗಳೂ ಇವೆ. ಇವುಗಳ ಬೆಲೆ ಸ್ವಲ್ಪ ಹೆಚ್ಚಾದರೂ ಇವುಗಳ ತಯಾರಕರು ಸಂಪೂರ್ಣ ತರಬೇತಿ ಮತ್ತು ವಿಕ್ರಯಾನಂತರದ ಸೇವೆ ನೀಡಬಲ್ಲರು. ಏಕೆಂದರೆ ಅವರಿಗೆ ತಮ್ಮ ಯಂತ್ರಗಳ ಬಗ್ಗೆ ಮತ್ತು ಭಾರತೀಯ ಬ್ಯಾಂಕಿಂಗ್ ಬಗ್ಗೆ ಚೆನ್ನಾಗಿ ತಿಳಿದಿದೆ. ವಿದೇಶಗಳಿಂದ ಸಂಪೂರ್ಣವಾಗಿ ಎಲ್ಲ ಉಪಕರಣಗಳನ್ನು ಆಮದುಮಾಡಿಕೊಂಡು ಇಲ್ಲಿ ಕೇವಲ ಅದನ್ನು ಜೋಡಿಸಿ ತಮ್ಮ ಮುದ್ರೆ ಒತ್ತುವ ಸಣ್ಣ ಸಂಸ್ಥೆಗಳಿವೆ. ಈ ಗಣಕಗಳ ಬೆಲೆ ಕಡಿಮೆಯಿರಬಹುದು. ಆದರೆ ಇವು ಬ್ಯಾಂಕುಗಳಿಗೆ ತಕ್ಕ ತರಬೇತಿ ಮತ್ತು ವಿಕ್ರಯಾನಂತರದ ಸೇವೆ ನೀಡಲಾರವು.

ಗಣಕ ವಿಜ್ಞಾನ ಈಗ ತಾಂತ್ರಿಕತೆ ಹೆಚ್ಚು. ಕೆಲಸ ಮಾಡಬಲ್ಲ ಸಣ್ಣ ಯಂತ್ರಗಳಲ್ಲಿ ಪ್ರಗತಿ ಹೊಂದುತ್ತಿದೆ. ತೀರ ದೊಡ್ಡ ಗಣಕವನ್ನು ಅನೇಕ ವಿಭಾಗಗಳು ಹಂಚಿಕೊಳ್ಳುವುದಕ್ಕಿಂತ ಒಂದು ಬಗೆಯ ಕೆಲಸಕ್ಕೇ ಕಾದಿರಿಸಿದ ಚಿಕ್ಕ ಯಂತ್ರಗಳನ್ನು ಈಗ ಅಳವಡಿಸುವುದು ಸಾಮಾನ್ಯ. ಈ ಯಂತ್ರಗಳನ್ನು ಸಂಪರ್ಕಿಸಬಲ್ಲ ತಾಂತ್ರಿಕತೆ ಈಗ ದೊರೆಯುವುದರಿಂದ ಹಳೆಯ ಪದ್ಧತಿಯ ಅನುಕೂಲಗಳ ಜೊತೆಗೆ ಈ ವ್ಯವಸ್ಥೆಯಲ್ಲಿರುವ ಸ್ವಾತಂತ್ರ್ಯದಿಂದ ಕೆಲಸಗಳು ಬೇಗ ಸಾಗುತ್ತವೆ.

ಬ್ಯಾಂಕುಗಳಲ್ಲಿ ವಿವಿಧ ಕಛೇರಿಗಳಲ್ಲಿ ವಿವಿಧ ರೀತಿಯ ಗಣಕಗಳ ವ್ಯವಸ್ಥೆಗಳನ್ನು ಅಳವಡಿಸಬಹುದು. ಶಾಖೆಯ ಕಾರ್ಯಗಳು ಬಹುಪಾಲು ಲೆಕ್ಕಾಚಾರ ಮತ್ತು ಲೆಕ್ಕ ಪುಸ್ತಕಗಳ ನಿರ್ವಹಣೆಗೆ ಸಂಬಂಧಪಟ್ಟವು. ಇಲ್ಲಿ ಮಾಹಿತಿ ಗಾತ್ರ ಕಮ್ಮಿ, ಆದರೆ ಪ್ರಕ್ರಮೀಕರಣದ ವೈವಿಧ್ಯ ಹೆಚ್ಚು. ಆದ್ದರಿಂದ ಇಲ್ಲಿ ಸಾಮಾನ್ಯ ಉದ್ದೇಶದ ಸಣ್ಣ ಯಂತ್ರಗಳು ಸೂಕ್ತವಾಗುತ್ತವೆ. ಶಾಖೆಗಳಿಂದ ಹಲವಾರು ಬಗೆಯ ತಃಖ್ತೆಗಳನ್ನೂ ಪತ್ರಗಳನ್ನೂ ಕಳಿಸುವುದರಿಂದ ಗಣಕದಲ್ಲಿ ಇದಕ್ಕೆ ತಕ್ಕ ಕ್ರಮವಿಧಿಗಳು ಮತ್ತು ಮುದ್ರಣ ವ್ಯವಸ್ಥೆ ಇರಬೇಕು. ಇದನ್ನು ಪದ ಪ್ರಕ್ರಮಿಕ (ವರ್ಡ್ಸ್ ಪ್ರೊಸೆಸರ್) ಎನ್ನುತ್ತಾರೆ.

ಬ್ಯಾಂಕಿನ ವಿಭಾಗೀಯ ಅಥವಾ ಪ್ರಾಂತೀಯ ಕಛೇರಿಗಳ ಕೆಲಸ ಮೂಲತಃ ಸಂಕಲನ ಮತ್ತು ವರದಿಗಳ ತಯಾರಿಕೆಗೆ ಸಂಬಂಧಪಟ್ಟದ್ದು. ಇಲ್ಲಿ ಮಾಹಿತಿಯ ಗಾತ್ರ ಹೆಚ್ಚು. ಆದರೆ ಪ್ರತಿ ಮಾಹಿತಿಯನ್ನೂ ಪ್ರಕ್ರಮೀಕರಿಸುವುದಕ್ಕೆ ಬೇಕಾದ ಸಮಯ ಕಮ್ಮಿ. ಆದ್ದರಿಂದ ಇಲ್ಲಿ ಹೆಚ್ಚು ಮಾಹಿತಿ ನಿರ್ವಹಿಸಬಲ್ಲ ಸ್ವಲ್ಪ ದೊಡ್ಡದಾದ ಯಂತ್ರಗಳು ಅಗತ್ಯ. ಇವನ್ನು ಪ್ರಧಾನ ಕಚೇರಿಯ ಯಂತ್ರಗಳೊಂದಿಗೆ ಸಂಪರ್ಕಿಸುವುದೂ ಅಗತ್ಯ. ಇದರಿಂದ ಸಂಕಲನ ಕಾರ್ಯವನ್ನು ಪೂರ್ಣವಾಗಿ ಪ್ರಾಂತೀಯ ಕಚೇರಿಯಲ್ಲಿಯೇ ನಡೆಸಿ ಸಿದ್ಧವಾದ ಮಾಹಿತಿಯನ್ನು ನೇರವಾಗಿ ಪ್ರಧಾನ ಕಛೇರಿಗಳಿಗೆ ವರ್ಗಾಯಿಸಬಹುದು. ಕ್ರಮೇಣ ಪ್ರಧಾನ ಕಛೇರಿಯ ಕೆಲಸವನ್ನು ಪ್ರಾಂತೀಯ ಕಛೇರಿಗಳಿಗೆ ನಿಯೋಜನೆ (ಡೆಲಿಗೇಟ್) ಮಾಡಬಹುದು.

ಪ್ರಧಾನ ಕಛೇರಿಗಳಲ್ಲಿ ನಡೆಸುವ ಪ್ರಕ್ರಮೀಕರಣ ಹೆಚ್ಚಾಗಿ ಖಾತೆಗಳ ಸಮನ್ವಯ (ರೆಕನ್ಸಿಲಿಯೇಷನ್ ಆಫ್ ಅಕೌಂಟ್ಸ್), ಉದರಿ ನಿಯಂತ್ರಣ, ವಿವಿಧ ರೀತಿಯ ವರದಿಗಳ ತಯಾರಿಕೆ ಮತ್ತು ಅವುಗಳ ವಿಶ್ಲೇಷಣೆ. ವಿವಿಧ ಕಾರ್ಯಭಾರಾತ್ಮಕ ವಿಭಾಗಗಳು ತಮ್ಮವೇ ಆದ ಯಂತ್ರಗಳನ್ನಿಟ್ಟುಕೊಳ್ಳುವುದು ಸೂಕ್ತ. ಇವನ್ನು ಒಂದಕ್ಕೊಂದು ಸಂಪರ್ಕಿಸಬಹುದು. ಪ್ರಧಾನ ಕಛೇರಿ ಮತ್ತು ಪ್ರಾಂತೀಯ ಕಛೇರಿಗಳಲ್ಲಿ ಪತ್ರವ್ಯವಹಾರ ಮತ್ತು ವರದಿಗಳ ತಯಾರಿಕೆಯನ್ನು ಬೇರೆಬೇರೆ ಯಂತ್ರಗಳಲ್ಲಿ ನಡೆಸುವುದರಿಂದ ಅವು ಸಮಯಕ್ಕೆ ಸರಿಯಾಗಿ ತಯಾರಾಗುವುದು ಸಾಧ್ಯ.

ಈ ಹಿಂದಣ ವಿವರಣೆಯಲ್ಲಿ ಗಣಕಗಳ ಆಯ್ಕೆಯಲ್ಲಿ ಪರಿಶೀಲಿಸಬೇಕಾದ ಹಲವಾರು ಅಂಶಗಳನ್ನು ವಿವೇಚಿಸಲಾಗಿದೆ. ಬ್ಯಾಂಕುಗಳಲ್ಲಿ ಗಣಕದ ಬಳಕೆ ಯಶಸ್ವಿಯಾಗಬೇಕಾದರೆ ಈ ಮುಂದಿನ ಸೂತ್ರಗಳನ್ನು ಅನುಸರಿಸುವುದು ಉತ್ತಮ : (i) ಗಣಕಗಳ ಬಗ್ಗೆ ಎಲ್ಲರಿಗೂ ಸರಿಯಾದ ತಿಳಿವಳಿಕೆ ನೀಡುವುದು. (ii) ಗಣಕವನ್ನು ಬಳಸಬಹುದಾದ ಕಾರ್ಯಕ್ಷೇತ್ರಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ತಕ್ಕ ಕ್ರಮವಿಧಿಗಳನ್ನು ತಯಾರಿಸುವುದು, (iii) ಗಣಕದ ಆಯ್ಕೆಯನ್ನು ಸರಿಯಾಗಿ ನಡೆಸುವುದು, (iv) ಸಂಬಂಧಪಟ್ಟ ಚಾಲಕರು ಮತ್ತು ಗಣಕದ ಕ್ರಮವಿಧಾಯಕರ ನಡುವೆ ಹೊಂದಾಣಿಕೆ ಕಲ್ಪಿಸುವುದು, (v) ಗಣಕದ ವ್ಯವಸ್ಥೆಗೆ ತಕ್ಕಹಾಗೆ ಕಾರ್ಯಪದ್ಧತಿಯನ್ನು ಸ್ವಲ್ಪ ಬದಲಾಯಿಸಿ ದಕ್ಷತೆ ಹೆಚ್ಚುವಂತೆ ಮಾಡುವುದು.

ಹಿಂದೆ ಹೇಳಿದಂತೆ ಗಣಕ ನಾವು ಹೇಳಿದ ಹಾಗೆ ಕೆಲಸ ಮಾಡಬಲ್ಲ ಮೂಕಯಂತ್ರ. ಅದನ್ನು ಸರಿಯಾಗಿ ಉಪಯೋಗಿಸುವುದು ನಮ್ಮ ಕೈಯಲ್ಲಿದೆ. ನಾವು ಬಳಸಿಕೊಳ್ಳುವಾಗ ತಪ್ಪು ಮಾಡಿ ಅದನ್ನು ದೂರುವುದು ಸರಿಯಲ್ಲ.

# ವಿದೇಶಿ ಬ್ಯಾಂಕುಗಳಲ್ಲಿ ಗಣಕೀಕರಣ*

ಜಿ. ಶಾಂತಾರಾಂ

ವಿದೇಶಗಳಲ್ಲಿರುವ ಬ್ಯಾಂಕುಗಳು ಗಣಕಗಳನ್ನು ಮೊದಲಿಗೆ ವಾಣಿಜ್ಯಕವಾಗಿ ಉಪಯೋಗಿಸಿದ ಸಂಸ್ಥೆಗಳ ಪೈಕಿ ಮೊದಲನೆಯವಾಗಿವೆ. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿರುವ ಬ್ಯಾಂಕುಗಳು ಕಳೆದ ಎರಡು ದಶಕಗಳಿಂದ ಚೆಕ್ಕುಗಳನ್ನು ಪ್ರಕ್ರಮಗೊಳಿಸಲು ವಿಶೇಷವಾದ ಉಪಕರಣಗಳನ್ನು ಉಪಯೋಗಿಸುತ್ತಿವೆ. ಎರಡನೆಯ ಮಹಾಯುದ್ಧದ ಅನಂತರ ವಿಶ್ವದ ಅರ್ಥವ್ಯವಸ್ಥೆಯಲ್ಲಾದ ವೃದ್ಧಿಯಿಂದ ಪಾಶ್ಚಾತ್ಯ ಬ್ಯಾಂಕುಗಳ ವ್ಯವಹಾರ ಹಾಗೂ ಲಾಭಗಳು ಹೆಚ್ಚಿದುವು. ವ್ಯವಹಾರ ವಿಸ್ತಾರಗೊಳ್ಳುತ್ತಿರುವುದರ ಜೊತೆಗೆ ಗ್ರಾಹಕರ ಸೇವೆಯ ಗುಣಮಟ್ಟವನ್ನು ಕಾಯ್ದುಕೊಳ್ಳುವುದೂ ಬ್ಯಾಂಕಿಂಗಿನಂಥ ಕಾರ್ಮಿಕಪ್ರಧಾನವಾದ ಸೇವಾ ಉದ್ಯಮದಲ್ಲಿ ಏರುತ್ತಿರುವ ಕಾರ್ಮಿಕ ವೆಚ್ಚಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದೂ ಅಸ್ಥಿರವಾದ ವಿನಿಮಯ ಮತ್ತು ಬಡ್ಡಿದರಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ಹಣ ಕೇಂದ್ರಗಳಿಂದ ಬಂದ ದತ್ತಾಂಶವನ್ನು ನಿಷ್ಕೃಷ್ಟವಾಗಿ ವಿಶ್ಲೇಷಿಸುವ ಅಗತ್ಯವೂ ಬ್ಯಾಂಕುಗಳು ಯಾಂತ್ರೀಕರಣಕ್ಕೆ ಅನಿವಾರ್ಯವಾಗಿ ಮೊರೆಹೊಗುವಂತೆ ಮಾಡಿದುವು. ಎಪ್ಪತ್ತರ ದಶಕದಿಂದೀಚೆಗೆ ಗಣಕದ ಬೆಲೆಯಲ್ಲಾದ ತೀವ್ರ ಇಳಿತಾಯದಿಂದಾಗಿ, ಸಣ್ಣ ಬ್ಯಾಂಕುಗಳೂ ತಮ್ಮ ಕಲಾಪಗಳನ್ನು ಗಣಕೀಕರಣಗೊಳಿಸಲು ಸಾಧ್ಯವಾಯಿತು. ಕೊನೆಯ ಐದು ವರ್ಷಗಳಲ್ಲಿ ಗಣಕದ ಬೆಲೆಗಳಲ್ಲಿ ಮತ್ತಷ್ಟು ಕಡಿಮೆಯಾಯಿತು. ಈ ಸ್ಥಿತಿ ಈಗಲೂ ಮುಂದುವರಿಯುತ್ತಿದೆ. ಒಬ್ಬ ಪರಿಣತನ ಪ್ರಕಾರ ಗಣಕದ ವ್ಯವಹಾರ ಅಭಿವೃದ್ಧಿಯಾದಂತೆ ಸ್ವಯಂಚಾಲಿತ ವಾಹನಗಳ ವ್ಯವಹಾರ ಅಭಿವೃದ್ಧಿ ಹೊಂದಿದ್ದರೆ ರೋಲ್ಸ್ ರಾಯ್ಸ್ ಕಾರು ಈಗ 2.75 ಡಾಲರಿಗೆ ಸಿಕ್ಕುತ್ತಿತ್ತು; ಮತ್ತು ಒಂದು ಲೀಟರ್ ಪೆಟ್ರೋಲಿಗೆ ಅದು 10 ಲಕ್ಷ ಕಿಮಿ. ಓಡುತ್ತಿತ್ತು.

ಪಶ್ಚಿಮದಲ್ಲಿ ಕಾಗದರಹಿತವಾದ ಬ್ಯಾಂಕಿಂಗಿಗೆ ಹೆಚ್ಚು ಒಲವಿದೆ. ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಇಂಗ್ಲೆಂಡಿನಲ್ಲಿ ಗಣಕೀಕರಣ ಕ್ಷೇತ್ರದಲ್ಲಿ ಹೆಚ್ಚು ಪ್ರಯತ್ನ ನಡೆದಿದೆ. ಅಮೆರಿಕದಲ್ಲಿ ಸಗಟು ಮತ್ತು ಚಿಲ್ಲರೆ ಬ್ಯಾಂಕಿಂಗ್ ಕ್ಷೇತ್ರಗಳ ಬಗ್ಗೆ ಸ್ಪಷ್ಟವಾದ ಸೀಮೆಗಳನ್ನು ಗುರುತಿಸಿದ್ದಾರೆ. ಸಿಟಿ ಚೇಸ್ ಮನ್‌ಹಟನ್ ಬ್ಯಾಂಕ್, ಬ್ಯಾಂಕ್ ಆಫ್ ಅಮೆರಿಕ ಮುಂತಾದ, ಇಡೀ ದೇಶಗಳಿಗೆ ಧನಪೋಷಣೆ ಮಾಡುವ, ಬೃಹತ್ ಬ್ಯಾಂಕುಗಳು ಒಂದು ಕಡೆಯಾದರೆ, ಸ್ಥಳೀಯ ಸಮುದಾಯದ ಪ್ರತಿದಿನದ ಬ್ಯಾಂಕಿಂಗ್ ಅಗತ್ಯಗಳನ್ನು ಪೂರೈಸುವ ದೇಶೀಯ ಬ್ಯಾಂಕುಗಳು ಮತ್ತೊಂದು ತುದಿಯಲ್ಲಿವೆ. ಒಂದಕ್ಕಿಂತ ಹೆಚ್ಚು ರಾಜ್ಯಗಳಲ್ಲಿ ಒಂದು ಬ್ಯಾಂಕು ಶಾಖೆಗಳನ್ನು ಹೊಂದಿರುವುದನ್ನು ಅಮೆರಿಕದ ಕಾನೂನು ನಿಷೇಧಿಸುತ್ತದೆ. ವೈಯಕ್ತಿಕ ಉಳಿತಾಯ, ಠೇವಣಿ ಮತ್ತು ಸಾಲಗಳ ಅಗತ್ಯಗಳನ್ನು ಪೂರೈಸದ ಬೃಹತ್ ಬ್ಯಾಂಕುಗಳು ಒಂದು ಕಡೆಯಾದರೆ, ಪ್ರಾದೇಶಿಕವಾಗಿ ಬೆಳೆಯದ ಮತ್ತು ದೊಡ್ಡ ಗ್ರಾಹಕರಿಗೆ ಸೇವೆ ಸಲ್ಲಿಸಲಾಗದ, ಅವರ ಅಗತ್ಯಗಳನ್ನು ಪೂರೈಸಲಾಗದ, ಸಣ್ಣ ಬ್ಯಾಂಕುಗಳು ಮತ್ತೊಂದು ಕಡೆಯಲ್ಲಿರುವ ಒಂದು ವಿಚಿತ್ರ ಪರಿಸ್ಥಿತಿ ಇದೆ.

ಈ ಎರಡೂ ಬಗೆಯ ಬ್ಯಾಂಕುಗಳು ಗಣಕೀಕರಣವನ್ನು ಅಭಿಗಮಿಸಿದ ರೀತಿಯ ಮೇಲೆ ಈ ಪರಿಸ್ಥಿತಿ ಪರಿಣಾಮ ಬೀರಿದೆ. ಲೆಕ್ಕ ಪದ್ಧತಿಯ ಕಷ್ಟವನ್ನು ನಿವಾರಿಸಿಕೊಳ್ಳಲು ಸಣ್ಣ ಬ್ಯಾಂಕಿಗೆ ಗಣಕ ಉಪಯುಕ್ತವಾಯಿತು. ಅತ್ಯಂತ ಭಾರಿ ಪ್ರಮಾಣದ ಮಾಹಿತಿಯನ್ನು ವಿಶ್ಲೇಷಿಸುವ ಶಕ್ತಿ, ಅದರ ಅಸಾಮಾನ್ಯ ವೇಗ ಹಾಗೂ ಹಣ ರವಾನೆಗೆ ಅದು ಒದಗಿಸುವ ಭದ್ರತೆಯಿಂದಾಗಿ, ಬೃಹತ್ ಬ್ಯಾಂಕುಗಳಿಗೆ ಅತ್ಯಮೂಲ್ಯವಾದ ಸಾಧನವಾಯಿತು.

ಈ ವಿಷಯಗಳನ್ನು ಕೂಲಂಕಷವಾಗಿ ವಿವರಿಸುವ ಮೊದಲಿಗೆ ಗಣಕ ಮತ್ತು ಚಿಲ್ಲರೆ ಬ್ಯಾಂಕ್ ವ್ಯವಹಾರವನ್ನು ತೆಗೆದುಕೊಳ್ಳೋಣ. ಚೆಕ್ಕುಗಳ ವಿಸ್ತೃತವಾದ ಬಳಕೆಯಿಂದ ಬ್ಯಾಂಕುಗಳ ವ್ಯವಹಾರ ಸುಲಭಸಾಧ್ಯವಾಯಿತು. ಕಾರಣ, ಚೆಕ್ಕಿನ ಮೇಲೆ ಬ್ಯಾಂಕಿನ ಸಂಕೇತ ಸಂಖ್ಯೆ ಮತ್ತು ಗ್ರಾಹಕನ ಖಾತಾ ಸಂಖ್ಯೆಯನ್ನು ಕಾಂತೀಯ ಮಸಿಯಲ್ಲಿ (ಮ್ಯಾಗ್ನೆಟಿಕ್ ಇಂಕ್) ನಮೂದಿಸಲಾಗಿರುತ್ತದೆ. ಒಂದು ಚೆಕ್ಕನ್ನು ನೀಡಿದಾಗ, ವಸೂಲಿದಾರ ಬ್ಯಾಂಕಿನಲ್ಲಿ ಮೊಬಲಗನ್ನು ಕಾಂತೀಯ ಮಸಿಯಲ್ಲಿ ಚೆಕ್ಕಿನ ಮೇಲೆ, ತೀರುವೆ ಮನೆಗೆ ಕಳುಹಿಸುವ ಮೊದಲು, ಬೆರಳಚ್ಚು ಮಾಡಲಾಗುವುದು. ತೀರುವೆ ಮನೆಯಲ್ಲಿ ಎಲ್ಲ ಚೆಕ್ಕುಗಳನ್ನೂ ಯಂತ್ರಗಳಿಗೆ ಊಡಿದಾಗ, ಕಾಂತೀಯ ಮಸಿಯಲ್ಲಿ ಬರೆದ ಮಾಹಿತಿಯನ್ನು ಓದಿ, ಅವನ್ನು ಪಾವತಿದಾರ ಬ್ಯಾಂಕುವಾರು ವಿಂಗಡಿಸುತ್ತದೆ. ಬ್ಯಾಂಕಿನ ಶಾಖಾವಾರಾಗಿ ಮತ್ತು ಖಾತಾಸಂಖ್ಯೆವಾರಾಗಿ ಅವುಗಳ ಪುನರ್ ವಿಂಗಡಣೆಯನ್ನು ಆಯಾ ಬ್ಯಾಂಕುಗಳು ಮಾಡಿಕೊಳ್ಳುತ್ತವೆ.

ಎಪ್ಪತ್ತರ ದಶಕದ ಆದಿಭಾಗದಲ್ಲಿ ಚೆಕ್ಕುಗಳಿಗೆ ಅಗ್ಗದ ಪರ್ಯಾಯವಾಗಿ ಉದರಿ ಕಾರ್ಡುಗಳನ್ನು ರೂಪಿಸಲಾಯಿತು. ಅಮೆರಿಕ ಮತ್ತು ಬ್ರಿಟನ್ನಿನ ಎಲ್ಲ ಬ್ಯಾಂಕುಗಳೂ ವೈಯಕ್ತಿಕ

* ಬ್ಯಾಂಕು ಗಣಕೀಕರಣ ಕುರಿತ ವಿಚಾರಸಂಕಿರಣದಲ್ಲಿ ಮಂಡಿಸಿದ ಪ್ರಬಂಧ

ಬ್ಯಾಂಕಿಂಗ್ ಗ್ರಾಹಕರಿಗೆ ತಮ್ಮವೇ ಆದ ಉದರಿ ಕಾರ್ಡು ಗಳನ್ನು ನೀಡುತ್ತವೆ. ಮೊದಲನೆಯದಾಗಿ ದಿನದ ಯಾವುದೇ ವೇಳೆಯಲ್ಲಿ ಗ್ರಾಹಕ ತನ್ನ ಖಾತೆಯಿಂದ ಹಣವನ್ನು ಬ್ಯಾಂಕಿನ ಹೊರಗೆ ಅಥವಾ ಅಂಗಡಿ ಸಮುಚ್ಚಯಗಳಲ್ಲಿ ರುವ ಸ್ವಯಂಚಲಿ ಪರಾಫ್ ಯಂತ್ರಗಳಿಂದ (ಆಟೊ ಮೇಟೆಡ್ ಟೆಲರ್ ಮೆಷಿನ್–ಎಟಿಎಂ) ಪಡೆಯಬಹುದು. ಈ ಯಂತ್ರಗಳನ್ನು ಜನರು ಬ್ಯಾಂಕಿನ ಕೆಲಸದ ವೇಳೆಯಲ್ಲೂ ಬಳಸಲು ಅಪೇಕ್ಷಿಸುತ್ತಾರೆ ಎಂದರೆ ನಮಗೆ ಆಶ್ಚರ್ಯವಾಗ ಬಹುದು.

ಎರಡನೆಯದಾಗಿ, ತನ್ನ ಖಾತೆಯ ತಃಖ್ತೆಗಳನ್ನು ಪಡೆದು ಅದರಲ್ಲಿಯ ಸಿಲ್ಕನ್ನು ಸರಿನೋಡಬಹುದು. ಅದಕ್ಕಿಂತ ಮುಖ್ಯವಾದುದೆಂದರೆ, ಗ್ರಾಹಕ ಹೆಚ್ಚಿನ ನಗದನ್ನು ಒಯ್ಯಬೇಕಾಗಿಲ್ಲ.

ಬ್ರಿಟನ್ನಿನಲ್ಲಿ ಪ್ರಯೋಗಾರ್ಥವಾಗಿ ಕೆಲವು ಪೆಟ್ರೋಲ್ ಬಂಕುಗಳಲ್ಲಿ ಇತ್ಯರ್ಥಕಗಳ (ಟರ್ಮಿನಲ್ಸ್) ಅವಕಾಶ ಮಾಡಿ ಕೊಡಲಾಗಿದೆ. ಕಾರು ಮಾಲೀಕನ ಪೆಟ್ರೋಲ್ ಬಿಲ್ಲನ್ನು ಅವನ ಬ್ಯಾಂಕ್ ಖಾತೆಗೆ ತತ್‌ಕ್ಷಣ ಖುಣಿಸಲಾಗುತ್ತದೆ. ಇದೇ ರೀತಿ ಸುಖಭೋಗವಾದ ಗೃಹ ಬ್ಯಾಂಕಿಂಗ್‌ನಲ್ಲಿ ಕಾರ್ಯ ಪ್ರಾರಂಭವಾಗಿದೆ.

ಅಮೆರಿಕ ಮತ್ತು ಬ್ರಿಟನ್ನಿನ ದೊಡ್ಡ ಬ್ಯಾಂಕುಗಳು ಗಣಕದ ಭವಸಾಮರ್ಥ್ಯವನ್ನು ಸಂಪೂರ್ಣವಾಗಿ ಬಳಸಿ ಕೊಂಡುವು. 1972ರಲ್ಲಿ ಸ್ಥಿರವಿನಿಮಯ ದರಗಳಿಂದ ಅಸ್ಥಿರ ವಿನಿಮಯ ದರಗಳ ಕಡೆಗೆ ಪ್ರಪಂಚ ವಾಲಿತು. ಆಗಿನಿಂದ ವಿನಿಮಯ ದರಗಳು ಬಹಳ ಚಂಚಲವಾಗಿವೆ.

ಬೃಹತ್ ಅಂತರರಾಷ್ಟ್ರೀಯ ಬ್ಯಾಂಕುಗಳ ವ್ಯವಹಾರ ಕೋಣೆಗಳು (ಡೀಲಿಂಗ್ ಚೇಂಬರ್ಸ್) ಅವುಗಳ ನರಮಂಡಲ ದಂತೆ ಕೆಲಸ ಮಾಡುತ್ತಿವೆ. ಬೇರೆ ಬೇರೆ ಕೇಂದ್ರಗಳಲ್ಲಿನ ವಿನಿಮಯ ದರಗಳನ್ನು ತೆರೆಯ ಮೇಲೆ ನೋಡುತ್ತಿರು ತ್ತಾರೆ. ಈ ವ್ಯವಹಾರಗಳನ್ನೆಲ್ಲ ಗಣಕಕ್ಕೆ ಒದಗಿಸುವುದರಿಂದ ಕಟ್ಟಕಡೆಯ ಕ್ಷಣದವರೆಗೆ ಬೇರೆ ಬೇರೆ ಕರೆನ್ಸಿಗಳಲ್ಲಿ ಬ್ಯಾಂಕಿನ ಸ್ಥಿತಿಯನ್ನು ತಿಳಿಯಲು ಸಾಧ್ಯವಾಗುತ್ತದೆ. ಪ್ರತಿಯೊಂದು ವಿದೇಶಿವಿನಿಮಯ ವಹಿವಾಟಿಗೆ ಎರಡು ವಿದೇಶಿ ಕರೆನ್ಸಿಗಳು ಬೇಕಾಗುವುದರಿಂದ, ಈ ಎರಡೂ ಕರೆನ್ಸಿಗಳಲ್ಲೂ ನಮೂದು ಗಳನ್ನು ಪಾರಣ ಮಾಡಬೇಕಾಗುತ್ತದೆ. ಆದುದರಿಂದ ಒಂದು ಬ್ಯಾಂಕು ಎಷ್ಟು ಕರೆನ್ಸಿಗಳಲ್ಲಿ ವ್ಯವಹಾರ ನಡೆಸುತ್ತೋ ಅಷ್ಟು ಕರೆನ್ಸಿಗಳಿಗೆ ಪ್ರಧಾನಖಾತಾ ಪುಸ್ತಕಗಳನ್ನು ಇಡ ಬೇಕಾಗುವುದು ಸಾಮಾನ್ಯ.

ಗಣಕದ ಅತಿ ಮುಖ್ಯವಾದ ಸಾಮರ್ಥ್ಯವೆಂದರೆ, ಅದು ಅಂಕಿಗಳನ್ನು ಸ್ವೀಕರಿಸುವ ಸಾಮರ್ಥ್ಯವಲ್ಲ, ದತ್ತಾಂಶವನ್ನು ಅರ್ಥಪೂರ್ಣ ಮಾಹಿತಿಯಾಗಿ ಪ್ರಕ್ರಮಿಸುವ ಸಾಮರ್ಥ್ಯವೇ ಆಗಿದೆ. ಈ ಕ್ಷೇತ್ರದಲ್ಲಿ ಅತ್ಯಾಧುನಿಕವಾದ ಬೆಳವಣಿಗೆಗಳು ಆಗುತ್ತಿವೆ. ಬಹ್ರೈನ್, ಸಿಂಗಪುರ, ಹಾಂಗ್‌ಕಾಂಗ್‌ಗಳಂಥ ಸ್ಥಳಗಳನ್ನೊಳಗೊಳ್ಳುವ ರೀತಿಯಲ್ಲಿ ಹಣ ಕೇಂದ್ರಗಳ ಸಂಖ್ಯೆ ನಿಧಾನವಾಗಿ ಬೆಳೆಯುತ್ತಿರುವಾಗ. ಬೃಹತ್ ಬ್ಯಾಂಕು ಗಳೂ ವಿಸ್ತಾರಗೊಂಡವು. ಆದರೂ ಬ್ಯಾಂಕುಗಳ ಪ್ರಧಾನ ಕಛೇರಿಗಳು ವಿಶ್ವಾದ್ಯಂತವಿರುವ ತಮ್ಮ ಶಾಖೆಗಳ ಚಟು ವಟಿಕೆಗಳ ಬಗ್ಗೆ ನಿರಂತರವಾದ ಪಥವನ್ನಿಡಲು ಸಮರ್ಥ ವಾಗಿವೆ. ಇತ್ತೀಚಿಗಿನ ನಾಜೂಕಾದ ಗಣಕಗಳ ಕ್ರಮವಿಧಿಗಳು ಕೇವಲ ಲೆಕ್ಕವಿಡುವುದಕ್ಕಿಂತ ಹೆಚ್ಚಿನದನ್ನು ಮಾಡುತ್ತವೆ. ಅವು ಯಾವುದೇ ರೀತಿಯ ಅಪೇಕ್ಷಿತ ವರದಿಯನ್ನು ತಯಾ ರಿಸುವಂತೆ ರೂಪಿಸಲಾಗಿರುತ್ತದೆ. ಅದು ಕೇಂದ್ರ ಬ್ಯಾಂಕಿಗೆ ಸಲ್ಲಿಸುವ ವರದಿಯಾಗಿರಬಹುದು ಅಥವಾ ಉದಾಹರಣೆಗೆ, ದಕ್ಷಿಣ ಕೊರಿಯದ ನಿರ್ಮಾಣ ಕಂಪನಿಯ ಇರಾಕಿನಲ್ಲಿಯ ಸಾಲ ಸಿಲ್ಕುಗಳನ್ನು ತಿಳಿದುಕೊಳ್ಳುವಂಥ ವಿಚಿತ್ರ ಕೆಲಸ ಗಳನ್ನೂ ಮಾಡುತ್ತದೆ. ಅಮೆರಿಕದಲ್ಲಿಯ ಬೃಹತ್ ಬ್ಯಾಂಕು ಗಳು ತಮ್ಮ ಬಾತ್ಮೀದಾರ ಬ್ಯಾಂಕುಗಳಿಗೆ ಇತ್ಯರ್ಥಕಗಳನ್ನು ನೀಡಲು ಶುರು ಮಾಡಿವೆ. ಇವು ತಃಖ್ತೆಗಳನ್ನು ಮತ್ತು ಮುಂದಿನ ಎರಡು ದಿನಗಳಲ್ಲಾಗುವ ಪಾವತಿ ಹಾಗು ಸ್ವೀಕರಣಗಳ ವಿವರಗಳನ್ನು ಆಧುನಾತನವಾಗಿ ಕೊಡುತ್ತವೆ. ಇದೇ ರೀತಿಯ ಸೇವೆಯನ್ನು ಬ್ರಿಟನ್ನಿನಲ್ಲಿ ಬ್ಯಾಂಕುಗಳು ತಮ್ಮ ದೊಡ್ಡ ಕಂಪನಿ ಗ್ರಾಹಕರಿಗೆ ನೀಡುತ್ತವೆ.

ವೈಯಕ್ತಿಕ ಗಣಕಗಳು ಅತ್ಯಂತ ಜನಪ್ರಿಯವಾಗುತ್ತಿರು ವುದರಿಂದ, ಮುಖ್ಯ ಗಣಕಕ್ಕೆ ಇವನ್ನು ಸಂಬಂಧಿಸಿ, ದತ್ತಾಂಶವನ್ನು ಮತ್ತಷ್ಟು ವಿಶ್ಲೇಷಿಸಲು ಉಪಯೋಗಿಸು ತ್ತಿದ್ದಾರೆ ಮತ್ತು ಇದೇ ಇತ್ಯರ್ಥಕಗಳನ್ನು ಅಂತರ ಸಂವಾಹಕಗಳಾಗಿ (ಇಂಟರ್‌ಕಾಮ್) ಬಳಸಿ ಕಾಗದದ ಉಪ ಯೋಗವನ್ನು ಕಡಿಮೆ ಮಾಡಬಹುದು.

ಗಣಕಗಳು ಕ್ರಾಂತಿಕಾರಕವಾದ ಬದಲಾವಣೆಗಳನ್ನು ತಂದಿರುವ ಬ್ಯಾಂಕಿಂಗ್ ಕ್ಷೇತ್ರವೆಂದರೆ ಹಣ ರವಾನೆಯದು. ಪ್ರತಿದಿನ ವಿಶ್ವಾದ್ಯಂತ ನಿರಂತರವಾಗಿ ಮತ್ತು ಖಚಿತವಾಗಿ ಕೋಟ್ಯಂತರ ಪಾವತಿಗಳ ರವಾನೆಯಾಗುವುದು ಪಾಶ್ಚಾತ್ಯ ಬ್ಯಾಂಕಿಂಗಿನ ಬುನಾದಿಯಾಗಿದೆ. ಲಂಡನ್ನಿನ ಒಂದು ಬ್ಯಾಂಕು ನ್ಯೂಯಾರ್ಕಿನ ಇನ್ನೊಂದು ಬ್ಯಾಂಕಿಗೆ 10 ದಶಲಕ್ಷ ಡಾಲರುಗಳನ್ನು ಸಾಲವಾಗಿ ನೀಡಿದರೆ, ಆಗ ಆ ಹಣ ಪಾವತಿದಾರ ಬ್ಯಾಂಕಿನಲ್ಲಿ ಕೇವಲ 10 ನಿಮಿಷಗಳಲ್ಲಿ ಜಮೆ ಯಾಗಿರುತ್ತದೆ. ಇದು "ಸ್ವಿಫ್ಟ್"ನಿಂದ ಸಾಧ್ಯವಾಗಿದೆ. 300 ಪಾಶ್ಚಾತ್ಯ ಬ್ಯಾಂಕುಗಳ ಸಹಕಾರಿ ಸಂಸ್ಥೆಯಾಗಿ ಸ್ಥಾಪಿತ ವಾದ "ಸ್ವಿಫ್ಟ್" ತನ್ನ ಎಲ್ಲ ಸದಸ್ಯ ಬ್ಯಾಂಕುಗಳಿಗೆ ಇತ್ಯರ್ಥಕ ಗಳನ್ನು ಒದಗಿಸುತ್ತದೆ. ಬ್ಯಾಂಕುಗಳಿಂದ ಜನ್ಯವಾಗುವ ಪಾವತಿಗಳು "ಸ್ವಿಫ್ಟ್"ನ ಗಣಕದ ಮೂಲಕ, ಪಾವ[illegible] ಬ್ಯಾಂಕಿನ ಇತ್ಯರ್ಥಕದಲ್ಲಿ ಪ್ರದರ್ಶನಗೊಳ್ಳುವುದಕ್ಕೆ ಮೊದಲು ವ್ಯಾಪಕವಾದ ಸ್ವಯಂಚಲೀಕೃತ ಸಂಕೇತಗಳ ಮೂಲಕ ಹಾದು ಹೋಗುತ್ತದೆ. ಮುಂದಿನ ವರ್ಷ ಭಾರ ತೀಯ ಬ್ಯಾಂಕುಗಳು "ಸ್ವಿಫ್ಟ್"ನ್ನು ಸೇರುವುದಿದೆ. ಸ್ವಿಫ್ಟ್ ಎಷ್ಟು ಜನಪ್ರಿಯವಾಗಿದೆ ಎಂದರೆ, ನ್ಯೂಯಾರ್ಕಿನಲ್ಲಿ ಸ್ಥಳೀಯ ತೀರುವೆಗಳನ್ನು ನಿರ್ವಹಿಸಲು ಚಿಪ್ಸ್ ಎಂಬ ಪದ್ಧತಿಯನ್ನು ಪ್ರಾರಂಭಿಸಲಾಗಿದೆ.

# ಬ್ಯಾಂಕಿಂಗ್ ಉದ್ಯಮದಲ್ಲಿ ಗಣಕೀಕರಣ*

ಟಿ. ವಿ. ಕಿಣಿ

ಬ್ಯಾಂಕಿಂಗ್ ಉದ್ಯಮ ಕಳೆದ ಹದಿನೈದು ವರ್ಷಗಳಲ್ಲಿ ಮಹತ್ತರವಾದ ಬದಲಾವಣೆಗಳಿಗೆ ಒಳಗಾಗಿದೆ. ಬ್ಯಾಂಕುಗಳು ಕೈಗೊಳ್ಳುತ್ತಿರುವ ಚಟುವಟಿಕೆಗಳು ಹಾಗೂ ನೀಡುತ್ತಿರುವ ವಿವಿಧ ಸೇವೆಗಳಲ್ಲಿಯ ಬದಲಾವಣೆಯ ಜೊತೆಗೆ ದೈನಂದಿನ ಬ್ಯಾಂಕಿಂಗ್ ವ್ಯವಹಾರಗಳಾದ ಚೆಕ್ಕುಗಳ ವಸೂಲಿ, ಹುಂಡಿಗಳ ವಸೂಲಿ, ಚೆಕ್ಕುಗಳ ತೀರುವೆ, ಡ್ರಾಫ್ಟುಗಳ ನೀಡಿಕೆ ಮತ್ತು ಪಾವತಿ, ಈ ವಿಷಯಗಳಲ್ಲಿ ಆಗಿರುವ ಅತಿಶಯವಾದ ಬೆಳವಣಿಗೆಯತ್ತ ನಿಮ್ಮ ಗಮನವನ್ನು ಸೆಳೆಯಬಯಸುತ್ತೇನೆ. 1960ರ ದಶಕದ ಅಂತ್ಯದ ಸ್ಥಿತಿಯೊಂದಿಗೆ ಇಂದಿನವರೆಗೆ ವ್ಯಾಪಾರದಲ್ಲಿ ಆಗಿರುವ ಬೆಳೆವಣಿಗೆಯನ್ನು ಅವಲೋಕಿಸಿದಾಗ ದೈನಂದಿನ ಬ್ಯಾಂಕಿಂಗ್ ವ್ಯವಹಾರದ ಮೇಲೆ ಉಂಟಾಗಿರುವ ಪರಿಣಾಮವನ್ನು ಅರಿಯಬಹುದು. ಬ್ಯಾಂಕ್ ಕಾರ್ಯಗಳು ವೈವಿಧ್ಯಮಯ ಹಾಗೂ ವಿಭಿನ್ನವಾಗುತ್ತಿರುವ ಈ ಸನ್ನಿವೇಶದಲ್ಲಿ ವ್ಯಾಪಾರ ಸಮುದಾಯದ ಹಾಗೂ ಬ್ಯಾಂಕಿನ ಹಿತದೃಷ್ಟಿಯಿಂದ ವಾಸ್ತವಿಕ ಬ್ಯಾಂಕ್ ಸೇವೆಯ ಗುಣಮಟ್ಟವನ್ನು ಹೆಚ್ಚಿಸುವುದು ಅಗತ್ಯವಾಗುತ್ತದೆ. ನನ್ನ ಅರ್ಥದಲ್ಲಿ ಗುಣಮಟ್ಟ ಹೆಚ್ಚಿಸುವುದು ಎಂದರೆ ಕ್ಷಿಪ್ರ ಕಾಲಾವಧಿಯಲ್ಲಿ ಗ್ರಾಹಕನ ಆವಶ್ಯಕತೆಗಳನ್ನು ಪೂರೈಸುವುದು, ಅಲ್ಲದೆ ವ್ಯಾಪಾರದ ಗಾತ್ರದ ಹೆಚ್ಚಳದಿಂದ ಉದ್ಭವವಾಗುವ ವಿಳಂಬಕ್ಕೆ ತಡೆ ಹಾಕುವುದು.

ಬ್ಯಾಂಕರುಗಳು ಇನ್ನೂ ಕೇವಲ ಠೇವಣಿ ಸ್ವೀಕರಿಸುವ ಮತ್ತು ಹಣ ನೀಡುವ ವ್ಯಕ್ತಿಗಳು ಮಾತ್ರ ಅಲ್ಲ. 1970 ರಿಂದ ಬ್ಯಾಂಕಿಂಗಿನ ಸಾಮಾಜಿಕ ಪರಿಕಲ್ಪನೆ ಅಸ್ತಿತ್ವಕ್ಕೆ ಬಂದಿದೆ. ಬ್ಯಾಂಕರುಗಳು ತಮ್ಮ ಸಾಂಪ್ರದಾಯಿಕ ಬ್ಯಾಂಕಿಂಗಿನಿಂದ ಬಹಳ ಮುಂದೆ ನಡೆದಿದ್ದಾರೆ. ಭಾರತ ಸರ್ಕಾರದ, ರಿಸರ್ವ್ ಬ್ಯಾಂಕಿನ ಮಾರ್ಗದರ್ಶಿ ಸೂತ್ರಗಳಿಗೆ ಅನುಸಾರವಾಗಿ ಮೇಲ್ವಿಚಾರಣೆಯೂ ಸೇರಿದಂತೆ ಹೆಚ್ಚುವರಿ ಜವಾಬ್ದಾರಿ ಹೊಂದಿರುವ ಬ್ಯಾಂಕುಗಳು ಸಾಲ ನೀಡಿಕೆ ಹಾಗೂ ಮೇಲ್ವಿಚಾರಣೆಯ ಗುಣಾತ್ಮಕ ಅಂಶಗಳ ಅಗತ್ಯವನ್ನು ಮನವರಿಕೆ ಮಾಡಿಕೊಳ್ಳುವಂತೆ ಆಗಿದೆ. ಒಂದು ಕಡೆಯಲ್ಲಿ ವ್ಯಾಪಾರದ ಹೆಚ್ಚಳ, ದೈನಂದಿನ ಬ್ಯಾಂಕಿಂಗ್ ವ್ಯವಹಾರದ ಮೇಲ್ವಿಚಾರಣೆ ನಡೆಸಲು ಇರುವ ಪ್ರಸ್ತುತ ವ್ಯವಸ್ಥೆಯನ್ನು ಮೀರಿ ನಿಂತಿದ್ದರೆ, ಮತ್ತೊಂದು ಕಡೆಯಲ್ಲಿ ಮುಂಗಡಗಳ ಮೇಲ್ವಿಚಾರಣೆ ಹಾಗೂ ಕೆಲವು ವಿಶೇಷೀಕೃತ ವ್ಯವಹಾರ ಒಪ್ಪಂದಗಳಾದ ವಣಿಕ ಬ್ಯಾಂಕಿಂಗ್, ವ್ಯಾಪಾರ ಸಲಹಾಕಾರ್ಯ, ವಿನಿಯೋಜನ ವ್ಯವಸ್ಥಾಪನೆ ಮುಂತಾದವುಗಳಿಗೆ ನುರಿತ ಮಾನವಶಕ್ತಿ ಅಗಾಧಪ್ರಮಾಣದಲ್ಲಿ ಅಗತ್ಯವಾಗಿದೆ. ಇಂಥ ಸನ್ನಿವೇಶದಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ, ಪರಿಣತಿ ಹೊಂದಿರುವ ಪ್ರಸಕ್ತ ಮಾನವಶಕ್ತಿಯನ್ನು ಮೇಲೆ ಹೇಳಿದ ವಿಶೇಷೀಕೃತ ಸೇವೆಗಳನ್ನು ಉತ್ತಮಪಡಿಸಲು ಉಪಯೋಗಿಸಿಕೊಳ್ಳಬಹುದು ಎಂಬುದು ನನ್ನ ಅಭಿಪ್ರಾಯ. ಈ ಕ್ಷೇತ್ರಗಳಲ್ಲಿ ಯಾಂತ್ರೀಕರಣ ಗಣನೀಯವಾದ ಪಾತ್ರವನ್ನೇನೂ ವಹಿಸಲಾರದು, ಏಕೆಂದರೆ ಪ್ರತಿಯೊಬ್ಬನ ಸಮಸ್ಯೆಗಳ ವಿವರವಾದ ಅರಿವನ್ನಷ್ಟೇ ಅಲ್ಲದೆ, ಅವನು ಪ್ರಸಕ್ತ ಉದ್ಯಮದ ಸಮಸ್ಯೆಗಳ ಬಗ್ಗೆ ಮತ್ತು ಗ್ರಾಹಕನ ಬಗ್ಗೆ ಆದ್ಯಂತವಾದ ತಿಳಿವಳಿಕೆ ಹೊಂದಿರಬೇಕಾಗುತ್ತದೆ. ಈ ಗುಣಧರ್ಮಗಳು ಸಾಲನೀಡಿಕೆಯ ತುರ್ತಾದ ಕಾರ್ಯಾಚರಣೆಯ ಪೂರ್ವಾಪೇಕ್ಷಿತ ಅಂಶಗಳಾಗಿವೆ.

ವ್ಯಾಪಾರ ಒಂದು ಚಲನಶೀಲ ಪರಿಸ್ಥಿತಿ. ಆರ್ಥಿಕ ಕಾರಣಕ್ಕಾಗಿಯೋ ಸರ್ಕಾರದ ಹಣಕಾಸಿನ ನೀತಿಯ ಪರಿಣಾಮವಾಗಿಯೋ ಉಂಟಾಗುವ ಬದಲಾವಣೆಗಳು ಗ್ರಾಹಕ ಮತ್ತು ಕೈಗಾರಿಕೆಯ ಮೇಲೆ ವಿಸ್ತೃತವಾದ ಪರಿಣಾಮವನ್ನು ಬೀರುತ್ತವೆ. ಅಂಥ ಪರಿಸ್ಥಿತಿಗಳ ಅರಿವಿಗೆ ವಿಷಯವನ್ನು ಕುರಿತಂಥ ಪ್ರಕಟಣೆಗಳು, ನಿಯತಕಾಲಿಕೆಗಳು ಮತ್ತು ಪುಸ್ತಕಗಳ ಅಧ್ಯಯನ ಅಗತ್ಯವಾಗಿದೆ. ಈ ಮುಂಚೆ ಹೇಳಲಾದ ವಣಿಕ ಬ್ಯಾಂಕಿಂಗ್ ಮತ್ತಿತರ ವಿಶೇಷೀಕೃತ ವ್ಯವಹಾರಗಳಲ್ಲಿ ಉಳಿವು ಹಾಗೂ ಬೆಳವಣಿಗೆ, ಗ್ರಾಹಕನೊಂದಿಗೆ ನಿರಂತರ ಸಂಬಂಧವಿಟ್ಟುಕೊಳ್ಳುವುದರಿಂದ ಹಾಗೂ ವಣಿಕ ಬ್ಯಾಂಕಿಂಗ್ ಸಂಬಂಧಿಯಾದ (ಉದಾಹರಣೆಗೆ ಬಂಡವಾಳ ನೀಡಿಕೆಗೆ ಸಂಬಂಧಿಸಿದಂತೆ) ಸರ್ಕಾರದ

* ಸಮನ್ವಯ ಸಮಿತಿಯ ಆಶ್ರಯದಲ್ಲಿ ಬೆಂಗಳೂರಿನಲ್ಲಿ ಏರ್ಪಡಿಸಿದ್ದ ವಿಚಾರಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.

ನೀತಿಗಳು, ಭಾರತೀಯ ಬಂಡವಾಳದಲ್ಲಿ ವಿದೇಶೀ ವಿನಿಯೋಜನೆಗಳು, ಅನಿವಾಸಿ ಭಾರತೀಯರಿಗೆ ಲಭ್ಯವಾಗುವ ರಿಯಾಯಿತಿಗಳು, ಏಕಸ್ವಾಮ್ಯ ಸಂಸ್ಥೆಗಳ ನಿರ್ಬಂಧ, ಕೈಗಾರಿಕಾ ಪರವಾನಗಿ ನೀಡಿಕೆಯ ಪದ್ಧತಿಯಲ್ಲಿನ ಬದಲಾವಣೆಗಳು, ಇದರೊಂದಿಗೆ ಷೇರು ಮಾರುಕಟ್ಟೆ ದರಸೂಚಿಗಳು, ವ್ಯಾಪಾರ ಬೆಳವಣಿಗೆ ಸೂಚ್ಯಂಕಗಳು, ಮುಂತಾದ ಮಾಹಿತಿಗಳನ್ನು ಆಧುನಿಕವಾಗಿಡುವುದು ಆವಶ್ಯಕವಾಗಿದೆ. ಈ ಕ್ಷೇತ್ರಗಳಿಗೆ ಸತತವಾದ ಮೇಲ್ವಿಚಾರಣೆ ಹಾಗೂ ನಿಖರವಾದ ಮಾಹಿತಿಯ ಅಗತ್ಯವಿದೆ, ಹಾಗೂ ತೌಲನಿಕವಾಗಿ ಇವು ಬ್ಯಾಂಕರರಿಗೆ ಆದರ್ಶ ವ್ಯಾಪಾರ ಮಟ್ಟವನ್ನು ತಲುಪಿಸುವ ಸಾಧ್ಯತೆಯನ್ನು ಪಡೆದಿದೆ ಎಂಬುದನ್ನು ನೀವು ಒಪ್ಪುತ್ತೀರಿ. ಈ ಅಂಶಕ್ಕೆ ಬ್ಯಾಂಕಿಂಗ್ ವ್ಯವಸ್ಥೆ ಪ್ರಾಧಾನ್ಯ ನೀಡಬೇಕು ಎಂಬುದರಲ್ಲಿ ಸಂಶಯವಿಲ್ಲ ಎಂಬ ನನ್ನ ಅಭಿಪ್ರಾಯವನ್ನು ನೀವೂ ಒಪ್ಪುತ್ತೀರಿ.

ಹಾಗೆಯೇ ಉದರಿ ನೀಡಿಕೆ ಕ್ಷೇತ್ರದಲ್ಲಿ ನಿಯಂತ್ರಣ ಹಾಗೂ ಅಭಿವೃದ್ಧಿ ಈ ಎರಡೂ ಅಂಶಗಳು ಪ್ರತಿಯೊಬ್ಬ ಗ್ರಾಹಕನಿಗೂ ವ್ಯಕ್ತಿಗತವಾದ ಗಮನ ನೀಡುವುದರ ಅಗತ್ಯವನ್ನು ಎತ್ತಿ ಹಿಡಿಯುತ್ತವೆ ಮತ್ತು ಈ ಗಮನವು ವಿವಿಧ ರೀತಿಯವಾಗಿರುತ್ತವೆ ಅಷ್ಟೇ ಅಲ್ಲ, ಕಾಲವ್ಯಯಕಾರಿ ಕೂಡ. ಅಸ್ವಸ್ಥ ಕೈಗಾರಿಕೆಗಳ ಪುನರುಜ್ಜೀವನ, ಸಮಸ್ಯೆಗಳಿಗೆ ಪಕ್ಕಾಗಿರುವ ಕೈಗಾರಿಕಾ ಘಟಕಗಳನ್ನು ಗುರುತಿಸುವ ಕಾರ್ಯ ಹಾಗೂ ಅವುಗಳನ್ನು ಸರಿಯಾದ ಮಾರ್ಗಕ್ಕೆ ತರುವುದು—ಇದೆಲ್ಲ ಸಕಾಲಿಕ ಕ್ರಮ ಹಾಗೂ ಶೀಘ್ರ ನಿರ್ಧಾರವನ್ನು ಅವಲಂಬಿಸಿರುತ್ತವೆ. ಮಾನವಶಕ್ತಿ ಮತ್ತು ಕಾಲದ ನಿರ್ಬಂಧಗಳಿರುವಾಗ ಈ ವ್ಯವಹಾರಗಳ ಪ್ರಾಮುಖ್ಯವನ್ನು ಕಡೆಗಣಿಸುವುದು ಬ್ಯಾಂಕರನಿಗೆ ಸಾಧ್ಯವಿಲ್ಲ. ವಾಣಿಜ್ಯ ಸಂಸ್ಥೆಗಳ ಎರಡು ವಾಸ್ತವಿಕ ಅಂಶಗಳಾದ ಬೆಳವಣಿಗೆ ಹಾಗೂ ಲಾಭಗಳನ್ನು, ಲಾಭದಾಯಕ ವ್ಯವಹಾರ ಕ್ಷೇತ್ರಗಳತ್ತ ಗಮನವನ್ನು ಕೇಂದ್ರೀಕರಿಸುವುದರ ಮೂಲಕ, ಉತ್ತಮವಾಗಿ ಸಾಧಿಸಬಹುದು. ಬ್ಯಾಂಕುಗಳು ಪ್ರಚಾರ ಪಡಿಸಿದ ಈ ವ್ಯವಹಾರದ ಹೆಚ್ಚಳವು ದೈನಂದಿನ ಕಾರ್ಯಗಳಾದ ಚೆಕ್ ಪಾವತಿ, ಚೆಕ್ಕುಗಳ ತೀರುವೆ, ವಸೂಲಿ, ಡ್ರಾಫ್ಟು ನೀಡಿಕೆ, ಪಾವತಿ, ಹುಂಡಿಗಳ ಕೊಳ್ಳಿಕೆ, ವಸೂಲಿ, ಮುಂತಾದ ಬ್ಯಾಂಕಿಂಗ್ ಕಾರ್ಯಗಳ ಮೇಲೆ ನೇರವಾದ ಪರಿಣಾಮ ಬೀರುತ್ತದೆ. ಈ ಕ್ಷೇತ್ರಗಳಲ್ಲಿ ಮಾನವಶಕ್ತಿಯನ್ನು ಹೆಚ್ಚಿಸುವುದರ ಮೂಲಕ ಸಮಸ್ಯೆಯನ್ನು ಎದುರಿಸಬಹುದೆಂದು ಹಲವರು ಭಾವಿಸಿರಬಹುದು. ಬಯಸಿದ ಉದ್ದೇಶವಾದ ಶೀಘ್ರ ವಸೂಲಿ ಮತ್ತು ಯೋಗ್ಯ ಲೆಕ್ಕ ಪದ್ಧತಿಯನ್ನು ಕೇವಲ ಮಾನವಶಕ್ತಿಯ ಹೆಚ್ಚಳದಿಂದಲೇ ಸಾಧಿಸಲಾಗುವುದಿಲ್ಲ ಎಂಬುದು ವಾಸ್ತವಿಕವಾಗಿ ತಿಳಿದು ಬಂದಿರುವ ಅಂಶ. ಏಕೆಂದರೆ ವ್ಯಾಪಾರದ ಹೆಚ್ಚಳ ಮತ್ತು ಮಾನವಶಕ್ತಿಯ ಹೆಚ್ಚಳ ಯಾವಾಗಲೂ ಹೊಂದಿಕೆಯಾಗುವಂಥವಲ್ಲ, ಮೊದಲನೆಯದು ಯಾವಾಗಲೂ ಎರಡನೆಯದನ್ನು ಮೀರಿ ಬೆಳೆಯುತ್ತಿರುತ್ತದೆ. ಪುಸ್ತಕಗಳು ತಾಳೆಯಾಗದಿರುವುದರಿಂದ ಹೆಚ್ಚುತ್ತಿರುವ ಬಾಕಿ ಕೆಲಸಗಳದು ಸಹವರ್ತಿ ಸಮಸ್ಯೆಯಾಗಿದೆ. ಬ್ಯಾಂಕಿಗೆ ಅನನುಕೂಲಕರವಾದ ಇಂಥ ಪರಿಸ್ಥಿತಿಯಿಂದ ವಂಚನೆ ಪ್ರಕರಣಗಳಿಗೂ ಎಡೆಯುಂಟಾಗುತ್ತದೆ. ಬ್ಯಾಂಕರರು ಈ ಸನ್ನಿವೇಶದಲ್ಲಿ ಇಂದಿನ ಹಾಗೂ ಭವಿಷ್ಯದಲ್ಲಿ ಬರುವ ಮಾನವಶಕ್ತಿಯನ್ನು ಕೇವಲ ಲೆಕ್ಕ ಪದ್ಧತಿಗೆ ವ್ಯರ್ಥ ಮಾಡದೆ ಇನ್ನೂ ಹೆಚ್ಚಿನ ಲಾಭಕರ ಮಾರ್ಗಗಳಲ್ಲಿ ತೊಡಗಿಸುವುದು ಅಗತ್ಯ ಎಂಬುದು ನನ್ನ ಭಾವನೆ. ಈ ಲೆಕ್ಕಪದ್ಧತಿಯ ಕೆಲಸ ಬಹು ಗಾತ್ರವುಳ್ಳದ್ದಷ್ಟೇ ಅಲ್ಲ ; ಅದು ಬೇಸರ ತರಿಸುವಂಥದು ; ಮಾಡಿದ್ದನ್ನೇ ಮಾಡಬೇಕಾಗುವುದರಿಂದ ಆ ಕೆಲಸದಲ್ಲಿ ತೊಡಗಿರುವವರ ನವೋನ್ಮೇಷಶಕ್ತಿಯನ್ನೇ ದುರ್ಬಲಗೊಳಿಸುತ್ತದೆ. ತಾಳೆಯಾಗದಿರುವುದು ಮತ್ತು ಬಾಕಿ ಕೆಲಸದ ಮೊತ್ತದ ಹೆಚ್ಚಳದಿಂದ ಉದ್ಭವವಾಗುವ ಕೆಲಸದ ಹೊರೆ ಹಾಗೂ ಅತೃಪ್ತಿಗಳು ಕೂಡ ಇಂತಹ ಹತಾಶೆಗೆ ಕಾರಣವಾಗಿವೆ. ಇಂಥ ಪರಿಸ್ಥಿತಿಯಿಂದ ಶಾಖೆಯಲ್ಲಿ ಪ್ರತಿಯೊಬ್ಬನಲ್ಲೂ ನೈತಿಕತೆ ನಶಿಸುತ್ತದೆ ಮತ್ತು ಕ್ರಮೇಣ ನಿರುತ್ಸಾಹ ಅಡಿಯಿಡುತ್ತದೆ ಎಂಬುದನ್ನು ಇಲ್ಲಿರುವ ನನ್ನ ಬ್ಯಾಂಕರು ಮಿತ್ರರೆಲ್ಲರೂ ಒಪ್ಪಿಯೇ ಒಪ್ಪಿಯಾರು.

ಇಂದಿನ ಅಧಿಕಾರಿ ಹಾಗೂ ಗುಮಾಸ್ತವರ್ಗದ ನೇಮಕಾತಿ ಧೋರಣೆ ಎಂತಹುದೆಂದರೆ, ಚೈತನ್ಯದಾಯಕ, ಹಾಗೂ ವ್ಯವಹಾರಪ್ರೇರಿತವಾದ ವಸ್ತುನಿಷ್ಠ ಆಗಮನವನ್ನು ಹೊಂದಿರುವ ದೃಢ ಹಾಗೂ ಚಲನಶೀಲ ಅರಿವಿನ ಹಿನ್ನೆಲೆಯೊಂದಿಗೆ ಉತ್ತಮ ಸಾಮಾನ್ಯಜ್ಞಾನದ ಪರಿಧಿಯುಳ್ಳ ಸರ್ವಶಕ್ತ ವ್ಯಕ್ತಿಗಳು ಮಾತ್ರ ಬ್ಯಾಂಕಿನಲ್ಲಿ ಸ್ಥಳ ಪಡೆಯಬಲ್ಲರು. ಇವರು ಉತ್ಪಾದಕ ವಯೋವರ್ಗದವರೂ ಆಗಿರುವುದರಿಂದ, ಉನ್ನತ ಲಾಭ ಹಾಗೂ ವ್ಯಾಪಾರ ವೃದ್ಧಿಯ ವಲಯದಲ್ಲಿ ಇವರನ್ನು ತೊಡಗಿಸುವುದರ ಮೂಲಕ ಇವರ ಬುದ್ಧಿಮತ್ತೆಯ ಅತ್ಯುಚ್ಚ ಲಾಭ ಪಡೆಯುವುದು ಬ್ಯಾಂಕುಗಳಿಗೆ ಸಾಧ್ಯವಾಗಬೇಕು. ಸದ್ಯದ ಪರಿಸ್ಥಿತಿಯಲ್ಲಿ, ಯಾಂತ್ರಿಕ ವಿಧಾನದಿಂದ ಅತಿ ಕಡಿಮೆ ಮಾನವಶಕ್ತಿಯಿಂದ ನಿಭಾಯಿಸಬಹುದಾದ ಲೆಕ್ಕ ಪದ್ಧತಿಗೆ ಸಂಬಂಧಿಸಿದ ದೈನಂದಿನ ಕೆಲಸಗಳ ಜವಾಬ್ದಾರಿಯಲ್ಲಿ ಇವರು ಸಿಕ್ಕಿಬಿದ್ದಿದ್ದಾರೆ. ಹೆಚ್ಚು ಶ್ರಮದಿಂದ ಕೂಡಿದ, ಲೆಕ್ಕಗಳ ತಾಳೆಯೂ ಸೇರಿದಂತೆ ಈ ಹಿಂದೆ ಉಲ್ಲೇಖಿಸಿರುವ ಬ್ಯಾಂಕ್ ಲೆಕ್ಕದ ಕೆಲಸಗಳ ಅಂಥ ಯಾಂತ್ರೀಕರಣದ ಅಗತ್ಯವನ್ನು ಗುರುತಿಸಲಾಗಿದೆ. ಈ ಯಾಂತ್ರೀಕರಣಕ್ಕೆ ಮತ್ತೊಂದು ಕಾರಣವೆಂದರೆ, ನಿಖರತೆ ಮತ್ತು ಒಪ್ಪವಾದ ನಿರೂಪಣೆಯ ಸಾಧ್ಯತೆ.

ನಾನು ಬ್ಯಾಂಕಿಗೆ ಸೇರಿದ ದಿನಗಳಲ್ಲಿ ರೂಢಿಯಲ್ಲಿದ್ದ ಮೊತ್ತ ಹಾಕುತ್ತಿದ್ದ ಮಾನಸಿಕ ವಿಧಾನವನ್ನು ಸ್ಮರಿಸುತ್ತೇನೆ. ಕೂಡುಯಂತ್ರದಿಂದಾಗಿ ಬಳಲಿಕೆಗೆ ವಿರಾಮ ಸಿಕ್ಕಿದಾಗ ಪ್ರತಿಯೊಬ್ಬರೂ ಅದನ್ನು ಅಂಗೀಕರಿಸಿದರು. ಅನಂತರ ಬಂದುದು ಲೆಕ್ಕಯಂತ್ರಗಳ ಯುಗ. ಮುದ್ರಣ

ಲೆಕ್ಕಯಂತ್ರಗಳು ವಿವಿಧ ಕಾರ್ಯಗಳನ್ನು ನಿರ್ವಹಿಸಲು ಶಕ್ತವಾಗಿದ್ದು, ಕೇವಲ ಕೂಡುಲೆಕ್ಕ ಮಾಡುತ್ತಿದ್ದ ಯಂತ್ರಕ್ಕಿಂತ ಹೆಚ್ಚು ಸಮರ್ಥವಾಗಿ ಕಂಡುಬಂದವು. ಈ ಉಪಕರಣಗಳಿಂದ ಲೆಕ್ಕ ಹಾಕುವುದರ ಸಮಸ್ಯೆಯನ್ನು ಪರಿಹರಿಸುವುದರ ಜೊತೆಗೆ ಲೆಕ್ಕ ತಾಳೆಮಾಡುವ ಸಮಸ್ಯೆಯನ್ನು ಕೂಡ ಪರಿಹರಿಸಲು ಶಕ್ಯವಾಯಿತು. ಈ ಯಂತ್ರಗಳನ್ನು ಈಗ ಬ್ಯಾಂಕಿಂಗ್ ವ್ಯವಸ್ಥೆಯ ಅಂಗಗಳೆಂದೇ ಪರಿಗಣಿಸಲಾಗಿದೆ. ಈಗ ಸುಸ್ಥಾಪಿತವಾಗಿರುವ, ಲೆಕ್ಕ ತಾಳೆಮಾಡಲೂ ಲೆಕ್ಕದ ತಃಖ್ತೆಯನ್ನು ಕಳುಹಿಸಲೂ ಉಪಯುಕ್ತವಾಗಿರುವ, ಖಾತೆ ನಮೂದು ಯಂತ್ರಗಳು ತೀರ ಇತ್ತೀಚಿನ ಆಗಮನವಾಗಿವೆ. ಅಲ್ಲದೆ ಈ ಯಂತ್ರಗಳು ಒಪ್ಪವಾದ ಹಾಗೂ ನಿಖರವಾದ ಕ್ರಮವನ್ನು ದೃಢಗೊಳಿಸುತ್ತವೆ. ಯಾಂತ್ರೀಕರಣವು ಕಾರ್ಮಿಕ ಬಲವನ್ನು ಸೀಮಿತಗೊಳಿಸುವ ಅಥವಾ ಹೆಚ್ಚಿನ ನೇಮಕಾತಿಯನ್ನು ಕುಂಠಿತಗೊಳಿಸುವ ಪ್ರವೃತ್ತಿಗೆ ಎಡೆ ಮಾಡಿಕೊಟ್ಟಿಲ್ಲ ಎಂಬ ನನ್ನ ಮಾತನ್ನು ಒಪ್ಪುತ್ತೀರಿ. ವಿಕ್ರಯ, ಲೆಕ್ಕದಾಖಲೆ ಹಾಗೂ ವೇತನ ಗಣನೆಗೆ ಕೆಲವು ದೊಡ್ಡ ಕಂಪನಿಗಳು ಗಣಕೀಕರಣದ ಮೊರೆ ಹೊಕ್ಕಿರುವುದನ್ನು ನೀವು ಗಮನಿಸಿರಬಹುದು. ಗಣಕೀಕರಣ ತನ್ನದೇ ಆದ ಉಪಯುಕ್ತತೆಯನ್ನು ತರುತ್ತದೆ. ಹೇಗೆಂದರೆ ಈ ಕೆಲಸಕ್ಕಾಗಿ ವ್ಯಯ ಮಾಡುತ್ತಿದ್ದ ಹೆಚ್ಚುವರಿ ಕಾರ್ಮಿಕ ಬಲವನ್ನು ಈ ಕಂಪನಿಗಳು ವ್ಯಾಪಾರ ಚಟುವಟಿಕೆಗಳ ಅಭಿವೃದ್ಧಿಗೆ ಬಳಸಿಕೊಳ್ಳಬಹುದು. ಬ್ಯಾಂಕುಗಳು ಅದೃಷ್ಟವಶಾತ್ ಈ ಕಂಪನಿಗಳಂತಲ್ಲದೆ ಬಿಕರಿದಾರ ಮಾರುಕಟ್ಟೆಯಲ್ಲಿ ಕಲಾಪ ನಡೆಸುತ್ತಿವೆ. ಈ ಮಾರುಕಟ್ಟೆ ವೈವಿಧ್ಯಮಯ ಹಾಗೂ ಸುಶಿಕ್ಷಿತವಾದುದರಿಂದ, ಬ್ಯಾಂಕುಗಳು ವ್ಯಾಪಾರಿ ವಾತಾವರಣದ ಲಾಭ ಪಡೆಯುವ ಅಸಂಖ್ಯಾತ ಹೊಸ ಬಗೆಯ ತಂತ್ರ ರಚನೆಯನ್ನು ಹುಟ್ಟುಹಾಕಬಹುದು. ಪರಿಸ್ಥಿತಿ ಹೀಗಿರುವಾಗ, ಬ್ಯಾಂಕುಗಳಲ್ಲಿ ಲಭ್ಯವಿರುವ ಈ "ಧೀಮಂತ" ಸಂಪನ್ಮೂಲವನ್ನು ಬ್ಯಾಂಕಿನ ವಿಶಾಲೋದ್ದೇಶವಾದ ವ್ಯವಹಾರಾಭಿವೃದ್ಧಿಗೆ ಹಾಗೂ ನವೋನ್ವೇಷಕಾರಿ ತಂತ್ರ ರಚನೆಗೆ ಬಳಸಿಕೊಳ್ಳದೆ ಸರಳವಾದ ಲೆಕ್ಕಾಚಾರಕ್ಕೆ ಉಪಯೋಗಿಸಿಕೊಳ್ಳುವುದು ಮೂರ್ಖತನದ ವಿಷಯ ಎಂದು ನನಗನ್ನಿಸುತ್ತದೆ. ಈ ಹೊಸ ಅಭ್ಯರ್ಥಿಗಳಿಗೆ ಸುಸ್ಥಾಪಿತ ಬ್ಯಾಂಕರನಿಗಿರುವಂತೆ ಪೂರ್ವಗ್ರಹಗಳು ಇಲ್ಲದಿರುವುದರಿಂದ ಅಂಥ ನವೋನ್ಮೇಷಣಗಳು ಹೊಸ ತಂತ್ರರಚನೆಯ ಬರವನ್ನು ನಿರೀಕ್ಷಿಸುತ್ತವೆ.

ಗಣಕೀಕರಣ ಕೈಗಾರಿಕೆಗಳಲ್ಲಿರುವ ಜನರನ್ನು ಉದ್ಯೋಗದಿಂದ ಹೊರಹಾಕುತ್ತದೆ ಮತ್ತು ಅದರಿಂದಾಗಿ ಮುಂದಿನ ಉದ್ಯೋಗಗಳಿಗೆ ಅವಕಾಶವಿರುವುದಿಲ್ಲ ಎಂಬುದು ಸಾಮಾನ್ಯಭಾವನೆ. ನನ್ನ ವೈಯಕ್ತಿಕ ದೃಷ್ಟಿಯಲ್ಲಿ ಇದೊಂದು "ಮಿಥ್ಯೆ". ಇದನ್ನು ಹೋಗಲಾಡಿಸುವುದು ಅಗತ್ಯವಾಗಿದೆ. ಕೋಳಿ ತತ್ತಿಯನ್ನಿಟ್ಟಾಗ ಆ ತತ್ತಿ ಒಡೆದು ಹೋಗುವುದೆ? ಹಾಗೆಯೇ ಐದು ಜನರ ಕೆಲಸವನ್ನು ಒಂದು ಯಂತ್ರ ಮಾಡುತ್ತದೆ ಎಂದ ಮಾತ್ರಕ್ಕೆ ನಿರುದ್ಯೋಗ ಅಥವಾ ಅಲ್ಪೋದ್ಯೋಗದ ಪರಿಸ್ಥಿತಿ ಉಂಟಾಗುವುದೂ ಸಾಧ್ಯವಿಲ್ಲ. ಬೇರೆ ಯಾವುದೇ ಅಂಗದಂತೆ ಒಂದು ಸಂಸ್ಥೆ ಕೂಡ ಒಂದು ನಿರ್ದಿಷ್ಟಮಿತಿಯವರೆಗೆ ಬೆಳೆಯಬಹುದು. ಇದೊಂದು ಲಾಜಿಸ್ಟಿಕ್‌ನ ಪ್ರಶ್ನೆಯೆಂದು ಯಾರಾದರೂ ಭಾವಿಸಬಹುದು. ಆದ್ದರಿಂದ ಯಾವುದೇ ಸಂಸ್ಥೆಯ ಗಾತ್ರ ವ್ಯವಸ್ಥಾಪನಯೋಗ್ಯ ಪರಿಮಿತಿಯೊಳಗೆ ಇರಬೇಕಾಗುವುದು ಅನಿವಾರ್ಯ. ಈ ಬಾಹ್ಯ ಅಂಶವನ್ನು ಗಮನದಲ್ಲಿಟ್ಟುಕೊಂಡರೆ ಒಂದು ವ್ಯಾಪಾರ ಸಂಸ್ಥೆ ತನ್ನ ಹೆಚ್ಚುವರಿ ಮಾನವಶಕ್ತಿಯನ್ನು ವ್ಯವಹಾರದ ಅಭಿವೃದ್ಧಿಗೆ ಬಳಸಿಕೊಂಡು ವ್ಯಾಪಾರ ಹಾಗೂ ವರಮಾನವನ್ನು ವೃದ್ಧಿಪಡಿಸಿಕೊಂಡರೆ ಅದು ಆ ಸಂಸ್ಥೆಯ ಸ್ವಹಿತಾಸಕ್ತಿಯ ದೃಷ್ಟಿಯಿಂದ ಮಾತ್ರವೇ ಅಲ್ಲದೆ ವಿದೂರಗತಿಯಲ್ಲಿ ಸಿಬ್ಬಂದಿಯ ಹಿತವನ್ನು ಕೂಡ ಸಾಧಿಸುತ್ತದೆ. ನಾನು ಈ ಮೊದಲೇ ಹೇಳಿದಂತೆ ಬ್ಯಾಂಕರುಗಳಾಗಿ ನಮಗೆ ಲಭ್ಯವಾಗಿರುವ ವ್ಯವಹಾರಾವಕಾಶಗಳು ಪರ್ಯಾಪ್ತ ಬಿಂದುವನ್ನು ತಲಪುವ ಸಾಧ್ಯತೆ ಸದ್ಯದಲ್ಲಿ ಇಲ್ಲ. ಇಂಥ ಸಂದರ್ಭದಲ್ಲಿ ಸಂಸ್ಥೆಯ ಕಾರ್ಯಕ್ಷಮತೆಯನ್ನು ಆದರ್ಶ ಪ್ರಮಾಣದಲ್ಲಿ ಬಳಸಿಕೊಳ್ಳುವ ಮೂಲಕ ಈ ಗುರಿ ಮುಟ್ಟುವ ಸರ್ವಪ್ರಯತ್ನವನ್ನು ಮಾಡಬೇಕು. ಗಣಕೀಕರಣದ ಅತಿ ಅವಲಂಬನೆಯಿಂದ ಸಮಸ್ಯೆಗಳ ಪರಿಹಾರಕ್ಕಿಂತ ಹೊಸ ಸಮಸ್ಯೆಗಳು ಉಂಟಾಗುತ್ತವೆ ಎಂಬ ಮಾತನ್ನು ನಾನೂ ಒಪ್ಪುತ್ತೇನೆ. ಆದ್ದರಿಂದ ಗಣಕೀಕರಣಕ್ಕೆ ಸರಿಯಾಗಿ ಹೊಂದುವಂತಹ ಕಾರ್ಯಕ್ಷೇತ್ರಗಳಲ್ಲಿ ಮಾತ್ರ ಯಂತ್ರವನ್ನು ಅಳವಡಿಸುವುದು ಅಗತ್ಯವಾಗಿದೆ. ಪ್ರಾಥಮಿಕ ಹೆಜ್ಜೆಯಾಗಿ ಕೇಂದ್ರ ಹಾಗೂ ವಲಯ ಆಧಾರಿತ ಸಂಬಳ ಸಾರಿಗೆ ಲೆಕ್ಕಾಚಾರ, ಅಂತರ ಕಚೇರಿ ಲೆಕ್ಕಗಳನ್ನು ಪ್ರಾರಂಭಿಕವಾಗಿ ಪ್ರಾದೇಶಿಕವಾಗಿ ಸಮನ್ವಯಗೊಳಿಸುವುದು, ಅನಂತರ ಕೇಂದ್ರ ಮಟ್ಟದಲ್ಲಿ ಸಮನ್ವಯಗೊಳಿಸುವುದು, ಡ್ರಾಫ್ಟು ನೀಡಿಕೆ ಹಾಗೂ ಪಾವತಿ ಲೆಕ್ಕವನ್ನು ಸಮನ್ವಯಗೊಳಿಸುವುದು, ಅನಂತರ ಹುಂಡಿ ಗುಣಭಾರವನ್ನು ಕಡಿಮೆಗೊಳಿಸುವುದು—ಇವನ್ನು ವ್ಯವಹಾರದ ಗಾತ್ರ ಹೆಚ್ಚು ಇರುವಲ್ಲಿ ಗಣಕೀಕರಿಸಬಹುದು. ಪ್ರತಿ ಶಾಖೆಯ ವೈಲಕ್ಷಣ್ಯಗಳನ್ನೂ ವರ್ಗೀಕರಿಸಬಹುದು. ಭಾರತೀಯ ಬ್ಯಾಂಕುಗಳ ಸಂಘ ಮತ್ತು ಸಿಬ್ಬಂದಿ ಸಂಘದ ಪ್ರತಿನಿಧಿಗಳ ನಡುವಣ ಚರ್ಚೆಯಿಂದ ಗಣಕೀಕರಣದ ಬಗ್ಗೆ ಸೂತ್ರಗಳನ್ನು ರೂಪಿಸಲು ಸಾಧ್ಯವಾಗಿರುವುದು ಒಂದು ಸಂತೋಷದ ಸಂಗತಿಯಾಗಿದೆ. ಗಣಕೀಕರಣಕ್ಕೆ ಸರಿಹೊಂದುವ ಕಾರ್ಯಕ್ಷೇತ್ರಗಳನ್ನು ಗುರುತಿಸುವ ಕಾರ್ಯ ಇನ್ನೂ ಸಾಗಬೇಕಾಗಿದೆ. ಪ್ರಯೋಗ ಮಾಡಿ ನೋಡುತ್ತ, ಅದರಿಂದುದ್ಭವಿಸುವ ಲೋಪದೋಷಗಳನ್ನು ನಿವಾರಿಸಿಕೊಳ್ಳುತ್ತ ಮುನ್ನಡೆಯಬೇಕಾಗಿದೆ. ಕಾಲ ಮತ್ತು ಅನುಭವ ಮಾತ್ರ ನಮ್ಮ ಈ ತಂತ್ರರಚನೆಯನ್ನು ಉತ್ತಮಪಡಿಸುವ ರೀತಿಯನ್ನು ಕಲಿಸಲಿದೆ.

# ಬ್ಯಾಂಕು ಗಣಕೀಕರಣ: ಒಟ್ಟುನೋಟ*

ಎಚ್ಚೆಸ್ಕೆ

ಬ್ಯಾಂಕು ಕಂಪ್ಯೂಟರೀಕರಣ ಅಥವಾ ಗಣಕೀಕರಣದ ವಿಚಾರವಾಗಿ ಇದುವರೆಗೂ ಮಾತಾಡಿದವರು ಈ ವಿಷಯದ ನಾನಾ ಮುಖಗಳ ಪರಿಚಯವನ್ನು ನಮಗೆಲ್ಲ ಮಾಡಿಸಿಕೊಟ್ಟಿದ್ದಾರೆ. ವಿದೇಶಿ ಬ್ಯಾಂಕುಗಳಲ್ಲಿ ಗಣಕೀಕರಣ ಎಷ್ಟರಮಟ್ಟಿಗೆ ಸಾಗಿದೆ, ಅದರ ಅನುಕೂಲ-ಪ್ರತಿಕೂಲ ಪರಿಣಾಮಗಳೇನು, ಭಾರತದ ಬ್ಯಾಂಕುಗಳಲ್ಲಿ ಗಣಕಗಳನ್ನು ಅಳವಡಿಸುವುದರಿಂದ ಏನು ಪ್ರಯೋಜನ, ಈ ಸಂಬಂಧವಾಗಿ ನಾವು ಎದುರಿಸಬೇಕಾಗಿ ಬರುವ ಸಮಸ್ಯೆಗಳೇನು, ಆ ಸಮಸ್ಯೆಗಳನ್ನು ಪರಿಹರಿಸುವ ಬಗೆಯೆಂತು—ಎಂಬ ವಿಚಾರಗಳನ್ನು ಕುರಿತು ಈ ಕ್ಷೇತ್ರದಲ್ಲಿ ಪರಿಣತರಾದವರು ಪ್ರಬಂಧಗಳನ್ನು ಮಂಡಿಸಿದ್ದಾರೆ, ಸಭೆಯಲ್ಲಿ ಉದ್ಭವಿಸಿದ ಪ್ರಶ್ನೆಗಳನ್ನು ಉತ್ತರಿಸಿದ್ದಾರೆ. ಬ್ಯಾಂಕ್ ವ್ಯವಸ್ಥಾಪನದ ದೃಷ್ಟಿಯಿಂದ, ಉದ್ಯೋಗಿಗಳ ದೃಷ್ಟಿಯಿಂದ, ಗ್ರಾಹಕರ ದೃಷ್ಟಿಯಿಂದ—ಹೀಗೆ ವಿಭಿನ್ನ ಕೋನಗಳಿಂದ ಈ ಸಮಸ್ಯೆಯ ಪರಿಶೀಲನೆ ನಡೆದಿದೆ. ಇಷ್ಟೊಂದು ಸಮಗ್ರವಾದ, ದೀರ್ಘವಾದ ವಿವೇಚನೆಯ ಅನಂತರ ಈ ವಿಚಾರಸಂಕಿರಣದ ಅಧ್ಯಕ್ಷ ಪೀಠದಿಂದ ನಾನು ಹೇಳಬೇಕಾದ್ದು ಹೆಚ್ಚಾಗಿ ಏನೂ ಇಲ್ಲ ಎಂದೇ ಎನಿಸುತ್ತದೆ. ಅಲ್ಲದೆ, ಆರಂಭದಲ್ಲೇ ನಾನು ಒಂದು ವಿಚಾರವನ್ನು ಕುರಿತಂತೆ ಒಪ್ಪಿಕೊಂಡುಬಿಡುವುದು ಒಳಿತು. ಬ್ಯಾಂಕಿಂಗ್ ವಿಷಯದಲ್ಲಿ ನನಗೆ ವಿಶೇಷವಾದ ಆಸಕ್ತಿ ಇದೆಯೆಂಬುದು ನಿಜವಾದರೂ, ಬ್ಯಾಂಕಿಂಗ್ ಕ್ಷೇತ್ರದಲ್ಲಿ ಗಣಕದ ಅಳವಡಿಕೆಯನ್ನು ಕುರಿತಂತೆ ನನ್ನ ಜ್ಞಾನ ಅತ್ಯಲ್ಪ. ಅದು ಇಲ್ಲವೇ ಇಲ್ಲವೆಂದರೂ ಸರಿಯೆನಿಸೀತು. ಈ ಕ್ಷೇತ್ರದಲ್ಲಿ ಗಣಕದ ಬಳಕೆಯ ಸಾಧಕ ಬಾಧಕಗಳ ವಾಸ್ತವಿಕ ಅನುಭವ ನನಗೆ ಇಲ್ಲ. ಆದ್ದರಿಂದ ಈ ವಿಚಾರವಾಗಿ ನಾನು ಆಡಬಹುದಾದ ಮಾತುಗಳು ವಿಶೇಷವಾಗಿ ಸಾಮಾನ್ಯನೊಬ್ಬನ ದೃಷ್ಟಿಯಿಂದ ಮಾತ್ರ ಎಂದು ಮೊದಲೇ ನಾನು ನಿಮಗೆ ಎಚ್ಚರಿಕೆ ನೀಡಬಯಸುತ್ತೇನೆ. ನನ್ನ ಮಾತುಗಳಿಗೆ ಎಷ್ಟು ಬೆಲೆ ಕೊಡಬೇಕೆಂಬುದು ನಿಮಗೇ ಬಿಟ್ಟ ಸಂಗತಿ.

ಬ್ಯಾಂಕುಗಳಲ್ಲಿ ಗಣಕದ ಬಳಕೆಯ ವಿಚಾರ ಈಚೆಗೆ ತುಂಬಾ ಪ್ರಧಾನವಾಗಿ ಪರಿಣಮಿಸಿದೆಯೆಂಬುದರಲ್ಲಿ ಸಂದೇಹವಿಲ್ಲ. ಈ ವಿಚಾರವಾಗಿ ಕೆಲವರಿಗೆ ವಿಶೇಷವಾದ ಆಸಕ್ತಿ ಉತ್ಸಾಹ ಇರುವಂತೆಯೇ ಇನ್ನು ಕೆಲವರಿಗೆ ಈ ಬಗ್ಗೆ ಆತಂಕ ಸಂದೇಹಗಳೂ ಉಂಟು. ಗಣಕದ ಬಳಕೆಯಿಂದ ಬ್ಯಾಂಕುಗಳಲ್ಲಿ ಉದ್ಯೋಗಕ್ಕೆ ಧಕ್ಕೆ ಬರಬಹುದು ಎಂಬ ಶಂಕೆ ವಿಶೇಷವಾಗಿ ಕಾಡಿಸುತ್ತಿದ್ದದ್ದರಿಂದ ಇದಕ್ಕೆ ಉದ್ಯೋಗಿಗಳ ವಿರೋಧ ವಿಶೇಷವಾಗಿತ್ತು. ಬಹುಕಾಲದ ಸಂಧಾನದ ಅನಂತರ ಭಾರತೀಯ ಬ್ಯಾಂಕುಗಳ ಸಂಘಕ್ಕೂ ಬ್ಯಾಂಕ್ ಕೆಲಸಗಾರರ ಸಂಘಗಳ ಪ್ರತಿನಿಧಿಗಳಿಗೂ ನಡುವೆ ಈ ಬಗ್ಗೆ ಒಪ್ಪಂದ ಆಗಿರುವ ಸಂಗತಿಯನ್ನೂ, ಈ ವಿಚಾರದಲ್ಲಿ ಕೆಲಸಗಾರರ ಸಂಘಗಳ ದೃಷ್ಟಿ ಏನೆಂಬುದನ್ನೂ ನೀವು ಈಗಾಗಲೇ ತಿಳಿದುಕೊಂಡಿದ್ದೀರಿ. ಬ್ಯಾಂಕುಗಳೊಳಗಿನ ಪರಿಕರ್ಮಗಳಿಗೆ ಕಂಪ್ಯೂಟರುಗಳನ್ನು ಎಷ್ಟರಮಟ್ಟಿಗೆ ಬಳಸಬಹುದು ಎಂಬುದನ್ನು ಕುರಿತಂತೆ ಈಗಾಗಲೇ ಸಾಕಷ್ಟು ಆಲೋಚನೆ ನಡೆದಿದೆ. ಇಂದು ಬ್ಯಾಂಕುಗಳು ನಡಸುತ್ತಿರುವ ಕಲಾಪಗಳು ನಾನಾಮುಖವಾದಂಥವು, ಅತ್ಯಂತ ಸಂಕೀರ್ಣವಾದಂಥವು. ದೇಶಾದ್ಯಂತ ಹಬ್ಬಿರುವ ಬ್ಯಾಂಕ್ ಶಾಖೆಗಳ ವಿಸ್ತೃತ ಜಾಲದ ಕಲಾಪಗಳನ್ನು ಸಮನ್ವಯಗೊಳಿಸಲು, ಇವುಗಳ ನಿರ್ವಹಣೆ ನಿಯಂತ್ರಣಗಳನ್ನು ಸುಸೂತ್ರಗೊಳಿಸಲು, ವೇಗವಾಗಿ ಬೆಳೆಯುತ್ತಿರುವ ಗ್ರಾಹಕವರ್ಗಕ್ಕೆ ಶೀಘ್ರ ಸೇವೆ ಸಲ್ಲಿಸಲು, ಬ್ಯಾಂಕ್ ಸೇವೆಯಲ್ಲಿ ನಿರತರಾದ ಉದ್ಯೋಗಿಗಳ ಕೆಲಸವನ್ನು ಸರಳಗೊಳಿಸಲು, ಮಾಹಿತಿ ಸಂಗ್ರಹಣೆ-ವಿಶ್ಲೇಷಣೆ-ಅನುಮಿತಿಗಳನ್ನು (ಇನ್‌ಫರೆನ್ಸ್) ಸುಗಮಗೊಳಿಸಲು, ಮೇಲುನೋಟಕ್ಕೆ ಪರಸ್ಪರ ಅಸಂಬದ್ಧವೆನಿಸುವ ಹಲವಾರು ಸಂಗತಿಗಳ ನಡುವಣ ಅಂತಃಸೂತ್ರಗಳನ್ನು ಕಂಡುಕೊಳ್ಳಲು, ವ್ಯವಸ್ಥಾಪಕ ವರ್ಗದವರು ಯಾವುದೇ ವಿಷಯವನ್ನು ಕುರಿತಂತೆ ಶೀಘ್ರವಾಗಿ ತೀರ್ಮಾನ ತೆಗೆದುಕೊಳ್ಳುವುದನ್ನು ಸುಲಭಗೊಳಿಸಲು ಗಣಕಗಳ ನೆರವು ಅಗತ್ಯ ಎಂಬ ವಿಚಾರವಾಗಿ ಎರಡು ಮಾತು ಇರಲು ಸಾಧ್ಯವಿಲ್ಲ. ಬ್ಯಾಂಕ್ ಸೇವೆಯ ವೆಚ್ಚವನ್ನು ತಗ್ಗಿಸುವಲ್ಲಿ, ಮತ್ತು ಯಾವುದೇ ವಿಷಯವನ್ನು ಕುರಿತಂತೆ ಯುಕ್ತವಾದ ತೀರ್ಮಾನ ತೆಗೆದುಕೊಳ್ಳಲು ಅಗತ್ಯವಾದ ಮಾಹಿತಿಯನ್ನು ಕೇಳಿದೊಡ

* ಬ್ಯಾಂಕು ಗಣಕೀಕರಣ ಕುರಿತ ವಿಚಾರಸಂಕಿರಣದ ಅಧ್ಯಕ್ಷಪೀಠದಿಂದ ಮಾಡಿದ ಲಿಖಿತ ಭಾಷಣ

ನೆಯೇ ಒದಗಿಸುವುದರಲ್ಲಿ ಗಣಕಗಳ ಪಾತ್ರ ಹಿರಿದಾದ್ದು. ಬ್ಯಾಂಕುಗಳೊಳಗೆ ತಾಂತ್ರಿಕ ಪ್ರಾವೀಣ್ಯವನ್ನು ನಿರ್ಮಿಸಲು ಅಗತ್ಯವಾದ ಹಾದಿ ಇದರಿಂದ ಸಿದ್ಧವಾಗುವುದೆಂಬುದು ನಿರ್ವಿವಾದ. ಆದರೆ ನಮ್ಮ ಮುಂದೆ ಇಂದು ಇರತಕ್ಕ ದೊಡ್ಡ ಪ್ರಶ್ನೆಯೆಂದರೆ ಇದು : ಗಣಕೀಕರಣ ಏತಕ್ಕೆ, ಹೇಗೆ ಮತ್ತು ಎಷ್ಟರಮಟ್ಟಿಗೆ ? ಈ ಪ್ರಶ್ನೆಯ ಮೂರೂ ಮುಖಗಳನ್ನು ಕುರಿತಂತೆ ಬಗೆಬಗೆಯ ಉಪಪ್ರಶ್ನೆಗಳು ಉದ್ಭವಿಸುವುದರಲ್ಲಿ ಸಂದೇಹವಿಲ್ಲ. ಇವನ್ನು ಎಷ್ಟರಮಟ್ಟಿಗಿನ ಜಾಣತನದಿಂದ ಬ್ಯಾಂಕುಗಳು ಪರಿಹರಿಸಿಕೊಳ್ಳಬಲ್ಲುವು ಎಂಬುದನ್ನೇ ಗಣಕೀಕರಣದ ಯಶಸ್ಸು ಅವಲಂಬಿಸಿದೆ ಎನ್ನಬಹುದು.

ಭಾರತದಲ್ಲಿ ಗಣಕ ಕ್ರಾಂತಿ ಆರಂಭವಾದ್ದು ಹಲವು ವರ್ಷಗಳ ಹಿಂದೆ. ಆದರೆ ಬ್ಯಾಂಕಿಂಗ್ ಕ್ಷೇತ್ರಕ್ಕೆ ಇದು ಅಷ್ಟಾಗಿ ಹರಿದುಬರಲಿಲ್ಲವೆಂಬುದನ್ನು ಒಪ್ಪಿಕೊಳ್ಳಬೇಕು. ಕೆಲವು ಬ್ಯಾಂಕುಗಳಲ್ಲಿ ಮಾತ್ರ ಗಣಕೀಕರಣದ ಪ್ರಯೋಗ ಇಷ್ಟಷ್ಟು ನಡೆಯಿತು. ಕೆಲವು ಸೀಮಿತ ಪರಿಕರ್ಮಗಳಿಗೆ ಮಾತ್ರ ಕಂಪ್ಯೂಟರುಗಳನ್ನು ಬಳಸಿಕೊಳ್ಳಲಾಯಿತು. ಶಾಖೆಗಳ ನಡುವಣ ಲೆಕ್ಕಗಳ ಸಮನ್ವಯ, ಕೆಲವು ವರದಿಗಳ ಕ್ರೋಡೀಕರಣ, ವ್ಯವಸ್ಥಾಪನದ ವರದಿಗಳ ರಚನೆ—ಈ ನಿಟ್ಟಿನಲ್ಲಿ ಗಣಕಗಳ ನೆರವು ಪಡೆದುಕೊಳ್ಳಲಾಯಿತು. ಆದರೆ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ, ಈ ಬ್ಯಾಂಕುಗಳಲ್ಲಿ ಬಳಕೆಯಲ್ಲಿದ್ದ ಮಾನವಚಾಲಿತ ವ್ಯವಸ್ಥೆಯ ಬದಲು ಗಣಕ ಪದ್ಧತಿಯನ್ನು ತರಲಾಯಿತು ಎಂಬುದು. ಆದ್ದರಿಂದ ಇದು ಬಹಳ ಮಟ್ಟಿಗೆ ತೇಪೆಯಾಗಿ ಪರಿಣಮಿಸಿತು. ಗಣಕದ ಸಜ್ಜಿಗೆ ಬೇಕಾದ ವಿಶಿಷ್ಟ ತಳಪಾಯವನ್ನು, ಚೌಕಟ್ಟನ್ನು, ವ್ಯವಸ್ಥೆಯನ್ನು ನಿರ್ಮಿಸಲಿಲ್ಲ. ಕೆಲವು ಬ್ಯಾಂಕುಗಳಲ್ಲಿ ಸ್ಥಾಪಿಸಲಾದ ದಾಖಲೆ ವ್ಯವಸ್ಥೆಗಳು ಬಹುಬೇಗ ಹಳತಾದುವು. ಅಗಾಧಗಾತ್ರದಲ್ಲಿ ಬಂದು ತುಂಬುವ ಅಂಕಿ-ಅಂಶ ಸಾಮಗ್ರಿಯನ್ನು ನಿರ್ವಹಿಸಲು ಇವು ಅಸಮರ್ಥವಾದುವು. ಇವುಗಳ ಪರಿಕರ್ಮ ಬಹಳ ತೊಡಕಿನದೆನಿಸಿತು. ಇವು ವಿಫಲಗೊಂಡುವು. ಅನೇಕ ವೇಳೆ ಹೊರಗಿನ ದತ್ತಾಂಶ ಪ್ರಕ್ರಮ ಅಭಿಕರಣಗಳ (ಡೇಟಾ ಪ್ರೋಸೆಸಿಂಗ್ ಏಜೆನ್ಸಿ) ನೆರವು ಪಡೆದುಕೊಳ್ಳಲಾಯಿತು. ಇದರಿಂದ ಬ್ಯಾಂಕುಗಳು ತಮ್ಮದೇ ಆದ ಮಾಹಿತಿ ತಂತ್ರಜ್ಞಾನ (ಇನ್‌ಫರ್ಮೇಷನ್ ಟೆಕ್ನಾಲಜಿ) ಕುರಿತ ಮೂಲಭೂತವಾದ ಅರಿವನ್ನು ಸಂಪಾದನೆ ಮಾಡಿಕೊಳ್ಳಲಾಗಲಿಲ್ಲ, ಸ್ವಾವಲಂಬನೆ ಬೆಳೆಯಲಿಲ್ಲ. ಬ್ಯಾಂಕಿನ ಅಗತ್ಯಗಳೇನು ಎಂಬುದನ್ನು ಅರಿಯಲಾರದ ಬಾಹ್ಯ ಸಂಸ್ಥೆಗಳಿಂದ ಬ್ಯಾಂಕಿಗೆ ಅಷ್ಟೇನೂ ಪ್ರಯೋಜನವಾಗಲಿಲ್ಲ. ಬ್ಯಾಂಕುಗಳು ತಮ್ಮ ಆಕರ ದಾಖಲೆಗಳನ್ನು ಹೊರಗಿನ ಸಂಸ್ಥೆಗಳಿಗೆ ಒಪ್ಪಿಸಿ, ಅವು ಪ್ರಕ್ರಮಗೊಳಿಸಿ ಕೊಟ್ಟ ಫಲಿತಾಂಶಗಳನ್ನೂ ಸಮಸ್ಯಾಪರಿಹಾರೋಪಾಯಗಳನ್ನೂ ಕಣ್ಣು ಮುಚ್ಚಿ ಸ್ವೀಕರಿಸಿ, ಅವು ವಿಧಿಸಿದ ಶುಲ್ಕವನ್ನೊಪ್ಪಿಸಬೇಕಾಯಿತು. ಇದರಿಂದ ಗಣಕದ ಸೇವೆಯ ವೆಚ್ಚ ಗಮನಾರ್ಹವಾಗಿ ಪರಿಣಮಿಸಿತಷ್ಟೇ ಅಲ್ಲ. ಗಣಕ ತಂತ್ರಜ್ಞಾನದ ಫಲವನ್ನೂ ಯೋಜಿತ ರೀತಿಯಲ್ಲಿ ಇತರ ಉದ್ಯಮಗಳು ಪಡೆದಂತೆ ಬ್ಯಾಂಕಿಂಗ್ ಉದ್ಯಮ ಪಡೆದುಕೊಳ್ಳಲಾಗಲಿಲ್ಲ. ಈ ಕ್ಷೇತ್ರದ ಭವಸಾಮರ್ಥ್ಯದ ಅರಿವು ಬ್ಯಾಂಕುಗಳಿಗೆ ಉಂಟಾಗಲಿಲ್ಲ. ಬ್ಯಾಂಕಿಂಗ್ ಮುನ್ನಡೆಗೂ ದಕ್ಷತೆಗೂ ಗಣಕದ ಪ್ರಯೋಜನ ಇದುವರೆಗೂ ದೊರಕಲಿಲ್ಲ. ಆದ್ದರಿಂದ ಇತರ ಉದ್ಯಮಗಳಲ್ಲಿಯ ಗಣಕದ ಬಳಕೆಯ ಮಟ್ಟದೊಂದಿಗೆ ಹೋಲಿಸಿದರೆ ಬ್ಯಾಂಕು ಬಹಳ ಹಿಂದೆ ಉಳಿದಿದೆಯೆಂಬುದರಲ್ಲಿ ಸಂದೇಹವಿಲ್ಲ.

ಬ್ಯಾಂಕ್ ಗಣಕೀಕರಣದ ಪ್ರಶ್ನೆಯ ವಿವೇಚನೆ ಮಾಡುವಾಗ, ಕಂಪ್ಯೂಟರ್ ಏನು ಮಾಡಬಲ್ಲುದು, ಏನು ಮಾಡಲಾರದು ಎಂಬುದರ ಸ್ಪಷ್ಟಕಲ್ಪನೆ ನಮಗೆ ಇರಬೇಕಾದ್ದು ಅತ್ಯಾವಶ್ಯಕ. ಗಣಕ ಮೂಲತಃ ಮಾಡುವ ಕೆಲಸ ಮೂರು ಬಗೆ : 1 ಸಂಕಲನ, ವ್ಯವಕಲನ, ಗುಣಾಕಾರ, ಭಾಗಹಾರಗಳನ್ನು ಕಣ್ಣು ಮಿಟುಕಿಸುವಷ್ಟು ವೇಗವಾಗಿ ಅದು ಮಾಡಬಲ್ಲುದು. 2 ಗೊತ್ತಾದ ಮಾಧ್ಯಮದಲ್ಲಿ ದಾಖಲಾದ ದತ್ತಾಂಶವನ್ನು ಅದು ಓದಬಲ್ಲುದು ಮತ್ತು ತನ್ನ ಲೆಕ್ಕಾಚಾರದ ಫಲಿತಾಂಶವನ್ನು ಲೇಖಿಸಬಲ್ಲುದು. ಕಂಪ್ಯೂಟ್ ಎಂಬ ಪದದ ಅರ್ಥವೇ ಎಣಿಕೆ ಮಾಡು, ಲೆಕ್ಕಮಾಡು ಎಂದು. ಕನ್ನಡ ಪದವಾದ ಗಣಕದ ಅರ್ಥ ಕೂಡ ಎಣಿಸುವುದು, ಲೆಕ್ಕಮಾಡುವುದು ಎಂದೇ. 3 ಯಾವುದಕ್ಕೆ ಯಾವುದನ್ನು ಕೂಡಬೇಕು, ಯಾವುದರಿಂದ ಯಾವುದನ್ನು ಕಳೆಯಬೇಕು, ಏನು ಬರೆಯಬೇಕು, ಎಲ್ಲಿ ಬರೆಯಬೇಕು ಮುಂತಾದವುಗಳ ಬಗ್ಗೆ ನಾವು ಕೊಡುವ ಸೂಚನೆಗಳನ್ನು ಅದು ಗಮನಿಸಿ ನೆನಪಿನಲ್ಲಿಟ್ಟುಕೊಂಡು ಯಥಾಕ್ರಮವಾಗಿ ಆ ಪರಿಕರ್ಮಗಳನ್ನು ನಡಸಿಕೊಡಬಲ್ಲುದು.

ಆದರೆ ಮಾನವನ ನಿಯಂತ್ರಣವಿಲ್ಲದೆ ಗಣಕ ಕೆಲಸ ಮಾಡಲಾರದು. ಇದರ ಕ್ರಿಯೆಗಾಗಿ ಮೂರು ಬಗೆಯ ಪರಿಣತರ ಅಗತ್ಯವುಂಟು. ವ್ಯವಸ್ಥಾವಿಶ್ಲೇಷಕ (ಸಿಸ್ಟಮ್ ಅನಲಿಸ್ಟ್) ಮೊದಲನೆಯ ಬಗೆಯ ತಜ್ಞ. ಗಣಕಯಂತ್ರವನ್ನು ಬಳಸಲಿಚ್ಛಿಸುವವರ ಸಮಸ್ಯೆಗಳೇನೆಂಬುದನ್ನು ಅವನು ಮೊದಲು ತಿಳಿದುಕೊಳ್ಳುತ್ತಾನೆ. ಆ ಸಮಸ್ಯೆಯನ್ನು ವಿಶ್ಲೇಷಿಸುತ್ತಾನೆ. ಅದಕ್ಕೆ ಪರಿಹಾರೋಪಾಯವನ್ನು (ಸಲ್ಯೂಷನ್) ಪಡೆಯಲು ಅಗತ್ಯವಾದ ವಿಧಾನವನ್ನು ಅವನು ರೂಪಿಸುತ್ತಾನೆ. ಎರಡನೆಯವನಾಗಿ ಬರುವವನು ಕ್ರಮವಿಧಾಯಕ (ಪ್ರೋಗ್ರ್ಯಾಮರ್). ಮಾಡಬೇಕಾದ ಪರಿಕರ್ಮದ ವಿವರಣೆಯನ್ನು ಅವನು ವಿಶ್ಲೇಷಕನಿಂದ ಪಡೆದುಕೊಳ್ಳುತ್ತಾನೆ. ಕಂಪ್ಯೂಟರ್ ಅಥವಾ ಗಣಕಕ್ಕೆ ಅರ್ಥವಾಗುವ ಅದರದೇ ಭಾಷೆಯಲ್ಲಿ ಅವನು ವಿವರವಾದ ಸೂಚನೆಗಳನ್ನು ಅಥವಾ ಕ್ರಮವಿಧಿಯನ್ನು ತಯಾರಿಸುತ್ತಾನೆ. ಕೊನೆಯಲ್ಲಿ ಬರುವವರು ಚಾಲಕರು(ಆಪರೇಟರ್ಸ್). ವಿಶ್ಲೇಷಕನಿಂದ ನಿಗದಿ ಮಾಡಲ್ಪಟ್ಟು, ಕ್ರಮವಿಧಾಯಕನಿಂದ ಗಣಕಕ್ಕೆ ಊಡಲಾದ ಕ್ರಮವಿಧಿಯ ಪ್ರಕಾರ ಕಂಪ್ಯೂಟರನ್ನು ದಿನದಿನವೂ ಬಳಸುವವರು ಚಾಲಕರು.

ಆದ್ದರಿಂದ ಯಾವುದೇ ಗಣಕ ವ್ಯವಸ್ಥೆಯ ಅಳವಡಿಕೆ ಮಾಡಬೇಕಾದರೆ ಈ ಮೂರೂ ಹಂತಗಳಲ್ಲಿ ಅದನ್ನು

ಕಾರ್ಯಾನ್ವಯಗೊಳಿಸಬೇಕಾಗುತ್ತದೆಂಬುದು ಮುಖ್ಯವಾಗಿ ಗಮನಿಸಬೇಕಾದ ವಿಚಾರ. ನಾವು ಅಂಗಡಿಯಿಂದ ಟ್ರಾನ್ಸಿಸ್ಟರೊಂದನ್ನು ಕೊಂಡು ತಂದು ಬಳಸುವಷ್ಟು ಸರಾಗವಲ್ಲ ಇದು. ಅಲ್ಲದೆ ಎಂಥ ಗಣಕ ಯಂತ್ರ ಬೇಕು, ಅದರಿಂದ ಯಾವ ಕೆಲಸವನ್ನು ಹೇಗೆ ಮಾಡಿಸಿಕೊಳ್ಳಬೇಕು, ಅದರೊಂದಿಗೆ ಯಾವ ಭಾಷೆಯಲ್ಲಿ ಸಂಭಾಷಣೆ ಮಾಡಬೇಕು ಎಂಬುದೆಲ್ಲಾ ಮುಖ್ಯವೇ.

ಗಣಕೀಕರಣ ಎರಡು ದೃಷ್ಟಿಗಳಿಂದ ಉಪಯುಕ್ತವಾದದ್ದು. ಅದಕ್ಕೆ ಆರ್ಥಿಕಮೌಲ್ಯವೂ ಇದೆ (ಎಕನಾಮಿಕ್ ವ್ಯಾಲ್ಯೂ), ವಿಸ್ಮಯಮೌಲ್ಯವೂ ಇದೆ (ಸರ್‌ಪ್ರೈಸ್ ವ್ಯಾಲ್ಯೂ). ಗಣಕ ದೊರಕಿಸಿಕೊಡುವ ಯಾವುದೇ ಮಾಹಿತಿಯಿಂದ ನಿಮ್ಮ ವ್ಯವಸ್ಥೆಯಲ್ಲಿರುವ ಯಾವುದೇ ದೋಷ ಬೆಳಕಿಗೆ ಬಂದು, ನಿಶ್ಚಿತ ಗುರಿಸಾಧನೆಗಾಗಿ ನೀವು ಆ ದೋಷ ಪರಿಹಾರಕ್ಕೆ ಕ್ರಮ ತೆಗೆದುಕೊಳ್ಳಬಹುದು. ಇದು ಆರ್ಥಿಕ ಮೌಲ್ಯ. ಪ್ರಸಕ್ತ ವ್ಯವಸ್ಥೆಯಿಂದ ದೊರಕದಿದ್ದ, ಗಣಕ ದೊರಕಿಸಿಕೊಡುವ ಕೆಲವು ಮಾಹಿತಿಗಳಿಂದ, ಫಲಗಳಿಂದ (ರಿಸಲ್ಟ್ಸ್) ವ್ಯವಸ್ಥಾಪಕರು ಕೆಲವು ತೀರ್ಮಾನಗಳನ್ನು ತೆಗೆದುಕೊಳ್ಳುವುದು ಸಾಧ್ಯವಾಗುತ್ತದೆ. ಗಣಕವನ್ನು ದಿಢೀರನೆ ನೀವು ಸ್ಥಾಪಿಸುವುದೂ ಸಾಧ್ಯವಾಗದು. ಈಗ ಮಾನವ ಕೆಲಸಗಾರರು ಮಾಡುತ್ತಿರುವ ಕೆಲಸಕ್ಕೆ ಅನಾಮತ್ತಾಗಿ ಗಣಕವನ್ನು ತಂದು ಕುಕ್ಕರಿಸುವುದಕ್ಕಾಗುವುದಿಲ್ಲ. ಅದರ ಬದಲು ಇದು ಎನ್ನುವುದಕ್ಕಾಗದು. ಗಣಕದ ಅಗಾಧ ಸಾಧ್ಯತೆಗಳನ್ನು ಸಮರ್ಪಕವಾಗಿ ಬಳಸಿಕೊಂಡು ಅದರ ಮೂಲಕ ವೆಚ್ಚವನ್ನು ತಗ್ಗಿಸಬೇಕಾದರೆ ಬ್ಯಾಂಕು ಶಾಖೆಗಳಲ್ಲಿಯ, ಮುಖ್ಯ ಕಛೇರಿಯಲ್ಲಿಯ ಈಗಿನ ಕೆಲಸ ಪದ್ಧತಿಗಳನ್ನು ಕೂಲಂಕಷವಾಗಿ ಅಭ್ಯಾಸಮಾಡಿ ನೇರ್ಪುಗೊಳಿಸಿ ಅನಂತರ ಕಂಪ್ಯೂಟರನ್ನು ಅಳವಡಿಸುವ ಬಗ್ಗೆ ಯೋಚಿಸಬೇಕು. ಇದಕ್ಕೆ ಉದಾಹರಣೆಯಾಗಿ ಇಂದು ಅನೇಕ ಬ್ಯಾಂಕುಗಳಲ್ಲಿರುವ ಲೆಕ್ಕಪದ್ಧತಿ ಹಾಗೂ ಮಾಹಿತಿ ಸಂಗ್ರಹಣೆ ಪದ್ಧತಿ ಇವನ್ನು ನೋಡಬಹುದು. ಇವೆರಡೂ ಇಂದು ಪ್ರತ್ಯೇಕವಾಗಿವೆ. ಶಾಖೆಗಳು ತಮ್ಮ ಮುಖ್ಯ ಕಛೇರಿಗೆ ಕಳುಹಿಸಿಕೊಡಬೇಕಾದ ಮಾಹಿತಿಯನ್ನು ನಾನಾ ಮೂಲಗಳಿಂದ ಅವು ಸಂಗ್ರಹಿಸಿ ಕ್ರೋಡೀಕರಿಸಿ ಕಳುಹಿಸಬೇಕಾಗುತ್ತದೆ. ಇದರಿಂದ ಅಪಾರವಾದ ಕಾಲವ್ಯಯವಾಗುತ್ತದೆ, ವಿವರಣಗಳನ್ನು ಕಳುಹಿಸುವಲ್ಲಿ ವಿಳಂಬವೂ ಆಗುತ್ತದೆ. ಮಾಹಿತಿ ಸಂಗ್ರಹಣೆಯನ್ನು ಲೆಕ್ಕಪದ್ಧತಿಗೆ ತಳಕು ಹಾಕಿದರೂ ಪ್ರಯೋಜನವಾಗದು. ಒಂದೇ ಬಗೆಯ ಕೆಲಸವನ್ನು ಎರಡು ಬಾರಿ ಮಾಡುವಂತಾಗಬಹುದು. ಸಂಗ್ರಹಣೆಯಾದ ಮಾಹಿತಿ ಲೆಕ್ಕಪದ್ಧತಿಯ ಉಪೋತ್ಪನ್ನವಾಗುವಂತೆ, ಮಾಹಿತಿ ಸಂಗ್ರಹಣೆಯೂ ಲೆಕ್ಕ ದಾಖಲೆಯೂ ಏಕಕಾಲದಲ್ಲಿ ಒಂದೇ ಪರಿಕರ್ಮದಿಂದ ಆಗುವಂತೆ ಮಾಡುವುದಾದರೆ ಅದರಿಂದ ಎಷ್ಟೋ ಕಾಲದ ಹಾಗೂ ವೆಚ್ಚದ ಉಳಿತಾಯ ಆಗುತ್ತದೆ. ಆದ್ದರಿಂದ ಗಣಕವನ್ನು ಅಳವಡಿಸುವಾಗ, ಒಂದೊಂದು ದಾಖಲೆಯಿಂದಲೂ ಯಾವ ಯಾವ ನಿಟ್ಟಿನಲ್ಲಿ ಏನೇನು ಫಲ ಪಡೆಯಬಹುದೆಂಬುದನ್ನು ಯೋಚಿಸಿ ಅದಕ್ಕೆ ತಕ್ಕಂತೆ ಸಮಗ್ರವಾದ ವ್ಯವಸ್ಥೆಯನ್ನು ರೂಪಿಸುವುದು ಅಗತ್ಯ. ಗಣಕ ವ್ಯವಸ್ಥೆಗೆ ಊಡಬಯಸುವ ನಿವಿಷ್ಟಿಯನ್ನು (ಇನ್‌ಪುಟ್) ಈ ದೃಷ್ಟಿಯಿಂದ ನಿರ್ಧರಿಸಬೇಕಾಗುತ್ತದೆ. ತೀರ್ಮಾನ ಕೈಗೊಳ್ಳಬೇಕಾದವನಿಗೆ ಅಗತ್ಯವಾದ ಎಲ್ಲ ಮಾಹಿತಿಯನ್ನೂ, ಫಲಗಳನ್ನೂ ಕ್ಷಣಾರ್ಧದಲ್ಲಿ ಒದಗಿಸಬಲ್ಲ ರೀತಿಯಲ್ಲಿ ಅದನ್ನು ಗೊತ್ತುಪಡಿಸಬೇಕು. ಅಂತರ ಶಾಖಾಶಿಲ್ಕುಗಳ ಸಮನ್ವಯ, ವರದಿಗಳ ಕ್ರೋಡೀಕರಣ ಮುಂತಾದವಕ್ಕೆ ಈಗಾಗಲೇ ಕಂಪ್ಯೂಟರ್‌ಗಳ ನೆರವು ಪಡೆದುಕೊಳ್ಳಲಾಗುತ್ತಿದೆ. ಬ್ಯಾಂಕುಗಳಲ್ಲಿ ಸ್ಥಾಪಿಸಲಾಗುವ ಹೊಸ ಕಂಪ್ಯೂಟರ್ ವ್ಯವಸ್ಥೆಯಲ್ಲಿ ಇವನ್ನೆಲ್ಲ ಅಡಕಮಾಡಿ ಸಮಗ್ರವಾದ ಪದ್ಧತಿಯನ್ನು ರೂಪಿಸುವ ವಿಚಾರವಾಗಿ ಪುನರ್ಪರಿಶೀಲನೆ ನಡಸಬೇಕು. ಯಾವುದೇ ಹೊಸ ವ್ಯವಸ್ಥೆ ತರ್ಕಬದ್ಧವಾಗಿರಬೇಕು, ಹಂತದಿಂದ ಹಂತಕ್ಕೆ ಕೊಂಡೊಯ್ಯುವಂತಿರಬೇಕು. ದಾಖಲೆ ವ್ಯವಸ್ಥೆಯ ಸರಳೀಕರಣ, ವ್ಯವಸ್ಥಾಪನಕ್ಕೆ ಅಗತ್ಯವಾಗುವ ಎಲ್ಲ ಮಾಹಿತಿಗಳ ಸಂಗ್ರಹಣ ಹಾಗೂ ಪೂರೈಕೆ—ಹೀಗೆ ಇಂದಿನ ಹಾಗೂ ಮುಂದಿನ ಎಲ್ಲ ಅಗತ್ಯಗಳನ್ನೂ ಗಣನೆಗೆ ತಂದುಕೊಂಡ ಸಮಗ್ರ ವ್ಯವಸ್ಥೆಯ ಸ್ಥಾಪನೆಯಿಂದ ಗಣಕೀಕರಣ ದುಬಾರಿ ವೆಚ್ಚದ್ದಾಗದು. ಇದನ್ನು ಆಯಾ ಇಲಾಖೆಯ ದೃಷ್ಟಿಯಿಂದ ನೋಡುವ ಬದಲು ಇಡೀ ಬ್ಯಾಂಕಿಂಗ್ ಸಂಸ್ಥೆಯ ದೃಷ್ಟಿಯಿಂದ ಪರಿವೀಕ್ಷಿಸಬೇಕಾಗುತ್ತದೆ, ಇದನ್ನು ಗಮನದಲ್ಲಿಟ್ಟು ಅಧ್ಯಯನ ನಡೆಸಬೇಕಾಗುತ್ತದೆ.

ಗಣಕ ವ್ಯವಸ್ಥೆಯನ್ನು ಯಾವುದೇ ವಿಭಾಗದಲ್ಲಿ ಜಾರಿಗೆ ತರಬೇಕಾದ ಪಕ್ಷದಲ್ಲಿ, ಅದನ್ನು ಬಳಸುವ ಬಗ್ಗೆ ನಿರ್ವಾಹಕರಿಗೆ ಸ್ಪಷ್ಟವಾದ ಅರಿವು ಇರಬೇಕಾದ್ದು ಅಗತ್ಯ. ಗಣಕ ವ್ಯವಸ್ಥೆಗೆ ಪೂರ್ವಭಾವಿಯಾಗಿ ಕೆಲವು ಅಗತ್ಯಗಳ ಪೂರೈಕೆಯಾಗಬೇಕು : ಮೊದಲನೆಯದಾಗಿ, ಪ್ರಸಕ್ತ ವಿಧಾನಗಳಲ್ಲಿ ಯುಕ್ತವಾದ ಬದಲಾವಣೆಗಳನ್ನು ಮಾಡಬೇಕು. ಎರಡನೆಯದಾಗಿ, ಬಹಳ ಸುಲಭವಾದ ಪರಿಕರ್ಮಗಳಿಗೆ ಗಣಕದ ಬಳಕೆ ಮಾಡುವುದು ಬೇಡ. ವ್ಯವಹಾರದಲ್ಲಿಯ ಕ್ಲಿಷ್ಟವಾದ ಸಂದಿಗ್ಧವಾದ ಹಂತಗಳಲ್ಲಿ ಗಣಕವನ್ನು ಎಷ್ಟು ಯಶಸ್ವಿಯಾಗಿ ಬಳಸಬಹುದೆಂಬುದರ ಬಗೆಗೆ ಪರೀಕ್ಷಣ ನಡೆಸಬೇಕು. ವ್ಯವಸ್ಥೆಗಳು, ಪ್ರಕ್ರಮಗಳು, ತೀರ್ಮಾನ ತೆಗೆದುಕೊಳ್ಳುವುದನ್ನು ಕುರಿತ ನಿಯಮಗಳು—ಇವೆಲ್ಲವನ್ನು ಅರ್ಥಮಾಡಿಕೊಂಡು ದಾಖಲಿಸಿದ ಮೇಲೆಯೇ ಗಣಕೀಕರಣದ ಕ್ರಮ ತೆಗೆದುಕೊಳ್ಳಬೇಕು. ಗಣಕ ವ್ಯವಸ್ಥೆಯನ್ನು ದಿಢೀರನೆ ಜಾರಿಗೆ ತರಲಾಗುವುದಿಲ್ಲ. ಮುಂದಾಗಿಯೇ ಎಲ್ಲವನ್ನೂ ಯೋಜಿಸಬೇಕು. ಮೂರನೆಯದಾಗಿ, ಯಾವುದೇ ಗೊತ್ತಾದ ಪರಿಕರ್ಮಗಳಿಗೆ ಕಂಪ್ಯೂಟರನ್ನು ಬಳಸುವ ಬಗ್ಗೆ ಹಿರಿಯ ನಿರ್ವಹಣಾಧಿಕಾರಿಗಳು ಖುದ್ದಾಗಿ ತೀರ್ಮಾನ ತೆಗೆದುಕೊಳ್ಳುವ ಆಸಕ್ತಿ ವಹಿಸಬೇಕು. ಈ ತೀರ್ಮಾನವನ್ನು ಇತರರಿಗೆ ಬಿಡಬಾರದು. ಹಿಂದೆ ಹೇಳಿದ ಹಾಗೆ ವ್ಯವಸ್ಥೆಯ ಅಧ್ಯಯನದ ಅನಂತರವೇ ಗಣಕೀಕರಣದ ಸ್ವರೂಪ

ವ್ಯಾಪಕತೆಗಳನ್ನು ನಿರ್ಧರಿಸಬೇಕು.

ಒಟ್ಟಿನಲ್ಲಿ ಗಣಕೀಕರಣದ ಬಗ್ಗೆ ಕೆಲವು ಸ್ಥೂಲ ನಿಯಮ ಗಳನ್ನು ಇಲ್ಲಿ ಉಲ್ಲೇಖಿಸಬಹುದು : ಗಣಕೀಕರಣಗೊಳಿಸುವ ಯಾವುದೇ ಕ್ಷೇತ್ರದಲ್ಲಿ ಅದಿಲ್ಲದಿದ್ದರೆ ಕೆಲಸ ಸುಗಮವಾಗಿ ಸಾಗುವುದಿಲ್ಲವೆ ? ಸಂಸ್ಥೆ ಸಮಸ್ಯೆಗಳನ್ನು ಎದುರಿಸುತ್ತಿದೆಯೆ ? ಅಥವಾ ಭವಿಷ್ಯದಲ್ಲಿ ಸಮಸ್ಯೆಗಳು ಉದ್ಭವಿಸುತ್ತವೆಯೆಂಬ ನಿರೀಕ್ಷೆ ಇದೆಯೆ ?

ಈ ಪ್ರಶ್ನೆಗೆ ಉತ್ತರ 'ಹೌದು' ಎಂದಾದರೆ ಗಣಕದ ಸ್ಥಾಪನೆಯ ಬಗ್ಗೆ ಮುಂದೆ ಹೆಜ್ಜೆ ಇಡಿ. ಇಲ್ಲ ಎಂದಾದರೆ ಗಣಕೀಕರಣ ಬೇಡ.

ಗಣಕವನ್ನು ಬಳಸುವುದೆಂದು ಮುಂದೆ ಹೆಜ್ಜೆ ಇಡುವಿರಾದರೆ, ಆ ಕ್ಷೇತ್ರದ ಇಡೀ ವ್ಯವಸ್ಥೆಗಳೂ ಪ್ರಕ್ರಮಗಳೂ ಸಮರ್ಪಕವಾಗಿ ರೂಪಿತವಾಗಿವೆಯೆ? ಅವನ್ನೆಲ್ಲಾ ದಾಖಲೆಗೊಳಿಸಲಾಗಿದೆಯೆ ?

ಈ ಪ್ರಶ್ನೆಗೆ 'ಹೌದು' ಎಂದು ಉತ್ತರವಾದರೆ ಇನ್ನೊಂದು ಹೆಜ್ಜೆ ಮುಂದೆ ಇಡಿ. 'ಇಲ್ಲ' ಎಂಬುದು ಉತ್ತರವಾದರೆ, ವ್ಯವಸ್ಥೆಗಳನ್ನು ಹಾಗೂ ಪ್ರಕ್ರಮಗಳನ್ನು ಸುಧಾರಿಸಲು, ನೇರ್ಪುಗೊಳಿಸಲು ಸಂಶೋಧನೆ ಹಾಗೂ ಅಭಿವೃದ್ಧಿ ಅಧ್ಯಯನ ನಡಸಿ, ಇದನ್ನು ಮಾಡಿದ ಮೇಲೂ ಸಮಸ್ಯೆ ಹಾಗೆಯೇ ಉಳಿದಿದ್ದು ಗಣಕೀಕರಣ ವಿನಾ ಸುಲಭ ಹಾಗೂ ಶೀಘ್ರ ಪರಿಕರ್ಮ ಸಾಧ್ಯವಿಲ್ಲವೆಂದಾದರೆ ಗಣಕೀಕರಣದ ಹಾದಿಯಲ್ಲಿ ಇನ್ನೊಂದು ಹೆಜ್ಜೆ ಮುಂದೆ ಇಡಿ. ಗಣಕದ ಬಳಕೆಗೆ ಅಗತ್ಯವಾದ ಅಧ್ಯಯನ ನಡಸಿ ಗಣಕವನ್ನು ಅಳವಡಿಸುವುದೆಂದಾದರೆ, ಅದಕ್ಕೆ ಇಡೀ ದಿನದ ಕೆಲಸ ಇದೆಯೇ ಇಲ್ಲವೇ ಎಂಬುದನ್ನು ಪರಿಶೀಲಿಸಿ. ಉಂಟೆಂದಾದರೆ ಗಣಕವನ್ನು ಕೊಳ್ಳುವ ಅಥವಾ ಗುತ್ತಿಗೆಗೆ ಪಡೆಯುವ ತೀರ್ಮಾನ ಮಾಡಿ. ಪೂರ್ಣ ವೇಳೆ ಅದರ ಪ್ರಯೋಜನವಿಲ್ಲವೆಂದೆನಿಸಿದರೆ ಗಣಕ ಸಲಹೆಗಾರರೊಂದಿಗೆ ಒಪ್ಪಂದ ಮಾಡಿಕೊಳ್ಳಿ ಅಥವಾ ನಿಮ್ಮಂಥ ಇತರ ಸಂಸ್ಥೆಗಳೊಂದಿಗೆ ಕೂಡಿ ಗಣಕ ಪಡೆಯಿರಿ.

ಗಣಕ ಸ್ಥಾಪನೆಯ ಬಗ್ಗೆ ಅಧ್ಯಯನ ನಡಸುವ ಪರಿಣತರ ತಂಡ ಕೆಲವು ಪ್ರಶ್ನೆಗಳಿಗೆ ಉತ್ತರ ನೀಡಬೇಕಾಗುತ್ತದೆ: ಸೂಚಿತ ವ್ಯವಸ್ಥೆಯ ಉದ್ದೇಶಗಳೇನು ? ಈ ಉದ್ದೇಶಗಳನ್ನು ವ್ಯವಸ್ಥೆ ಹೇಗೆ ಪೂರೈಸಬಲ್ಲುದು ? ಸೂಚಿತ ವ್ಯವಸ್ಥೆಯಿಂದ ಸಂಸ್ಥೆಯ ಸರ್ವಾಂಗೀಣ ಯೋಜನೆ-ನಿರ್ದೇಶನ-ನಿಯಂತ್ರಣಗಳು ಗಮನಾರ್ಹವಾಗಿ ಉತ್ತಮಗೊಳ್ಳುವುವೆ ? ಈಗಿನ ವ್ಯವಸ್ಥೆಗಿಂತ ಈ ಹೊಸ ವ್ಯವಸ್ಥೆ ಯಾವ ಸುಧಾರಣೆಗಳನ್ನು ತರುತ್ತದೆ ? ಇವನ್ನು ಅಳತೆ ಮಾಡಬಹುದೆ ? ಹೊಸ ವ್ಯವಸ್ಥೆಯಿಂದ ಎಷ್ಟರ ಮಟ್ಟಿನ ಉಳಿತಾಯವಾಗುತ್ತದೆ ? ಈ ಉಳಿತಾಯ ಪರಿಸ್ಥಿತಿ ಎಷ್ಟು ಕಾಲ ಇರಬಹುದು ? ಇದನ್ನು ನಿರ್ವಹಿಸಲು ಹಣಕಾಸು, ಭೌತ ಹಾಗೂ ಮಾನವಸಂಪತ್ತಿನ ರೂಪದಲ್ಲಿ ಇದಕ್ಕಾಗಿ ಹೂಡಬೇಕಾಗುವ ವಿನಿಯೋಜನೆ (ಇನ್‌ವೆಸ್ಟ್‌ಮೆಂಟ್) ಎಷ್ಟು ? ಸಂಸ್ಥೆಯ ಈಗಿನ ಅನುಭವದಿಂದಲೇ ಈ ವ್ಯವಸ್ಥೆಯನ್ನು ನಿರ್ವಹಿಸಬಹುದೆ ? ಇಲ್ಲವಾದರೆ ಈ ಗಣಕ ವ್ಯವಸ್ಥೆಯನ್ನು ನಿರ್ವಹಿಸಲು ಅಗತ್ಯವಾದ ಕೌಶಲವನ್ನು ಸಂಸ್ಥೆ ಹೇಗೆ ಪಡೆದುಕೊಳ್ಳುತ್ತದೆ ? ಹೊಸದಾಗಿ ಕುಶಲ ಕೆಲಸಗಾರರನ್ನು ನೇಮಿಸಿಕೊಳ್ಳುವುದರ ಮೂಲಕವೆ ? ಹಾಗಾದರೆ ಅವರ ಸೇವೆ ಲಭ್ಯವಾಗುವುದು ಯಾವಾಗ ? ಸಲಹೆಗಾರರ ಸೇವೆ ಪಡೆಯುವುದಾದರೆ ಎಷ್ಟು ಕಾಲ ? ಅಗತ್ಯ ಸಿಬ್ಬಂದಿ, ಲೆಕ್ಕ ಪದ್ಧತಿಗಳು, ಗ್ರಾಹಕರ ಸೇವೆ ಮುಂತಾದವನ್ನು ಕುರಿತಂತೆ ನೀವು ಮಾಡಬಯಸುವ ಬದಲಾವಣೆಗಳು ಬ್ಯಾಂಕಿನ ನೀತಿಗಳಿಗೆ ಅನುಗುಣವಾಗಿಯೇ ಇವೆಯೆ ? ಅಥವಾ ನೀತಿಗಳಲ್ಲೇ ಬದಲಾವಣೆ ಅಗತ್ಯವೆ ? ಇಂಥ ಬದಲಾವಣೆಗಳು ಯಾವುವು ? ಈ ಪ್ರಶ್ನೆಗಳಿಗೆಲ್ಲಾ ಅಧ್ಯಯನ ತಂಡ ಸಮರ್ಪಕವಾದ ಉತ್ತರ ನೀಡಬೇಕಾದರೆ ಆ ತಂಡಕ್ಕೆ ಸಂಸ್ಥೆಯ ಕಲಾಪಗಳ ಅನುಭವ ಇರಬೇಕು, ದತ್ತಾಂಶ ಪ್ರಕ್ರಮೀಕರಣಕ್ಕಾಗಿ (ಡೇಟಾ ಪ್ರೋಸೆಸಿಂಗ್) ಬಳಸಬಹುದಾದ ಸಲಕರಣೆಗಳ ಜ್ಞಾನವಿರಬೇಕು, ಸಂದರ್ಶನಗಳನ್ನು ನಡಸುವ ಹಾಗೂ ದತ್ತಾಂಶವನ್ನು ವಿಶ್ಲೇಷಿಸಿ ಸಂಕ್ಷೇಪಿಸುವ ಕೌಶಲವಿರಬೇಕು, ವೈಜ್ಞಾನಿಕ ವ್ಯವಸ್ಥಾಪನ (ಸೈಯಿಂಟಿಫಿಕ್ ಮ್ಯಾನೇಜ್‌ಮೆಂಟ್) ವಿಧಾನಗಳ ಸಾಕಷ್ಟು ಜ್ಞಾನವಿರಬೇಕು.

ವ್ಯವಸ್ಥೆಯ ಅಧ್ಯಯನ ಮಾಡುವುದರಲ್ಲಿ ಅನೇಕ ಸಲಹಾ ಸಂಸ್ಥೆಗಳು ಮುಂದೆ ಬರುವುದುಂಟು. ಗಣಕ ತಯಾರಿಕಾ ಸಂಸ್ಥೆಗಳೂ ಈ ನೆರವು ನೀಡಬಹುದು. ಆದರೆ ಸಾಧ್ಯವಾದಷ್ಟು ಮಟ್ಟಿಗೆ ಹೊರಗಿನ ಅಭಿಕರಣಗಳ ನೆರವನ್ನು ಈ ವಿಚಾರದಲ್ಲಿ ತೆಗೆದುಕೊಳ್ಳದಿರುವುದು ಮೇಲು. ಗಣಕದ ಸ್ಥಾಪನೆಗೆ ಬೇಕಾದ ಉಪಕರಣ ತಂತ್ರಜ್ಞಾನವನ್ನೊದಗಿಸಿ ಲಾಭ ಪಡೆಯುವ ಸಂಸ್ಥೆಗಳನ್ನು ವ್ಯವಸ್ಥೆಯ ಅಧ್ಯಯನ ಕಾರ್ಯದಲ್ಲಿ ಉಪಯೋಗಿಸಿಕೊಳ್ಳಬಾರದು. ಏಕೆಂದರೆ ಅವು ತಮ್ಮ ಲಾಭದ ದೃಷ್ಟಿಯಿಂದಲೇ ನಿಮಗೆ ಸಲಹೆ ನೀಡುತ್ತವೆ, ನಿಮ್ಮ ಅನುಕೂಲದ ದೃಷ್ಟಿಯಿಂದ ಅಲ್ಲ.

ವ್ಯವಸ್ಥೆಯ ಅಧ್ಯಯನ ನಡಸಿದ ಮೇಲೆ, ಗಣಕಾಧಾರಿತ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಬೇಕೆಂದು ತೀರ್ಮಾನವಾದರೆ ಆಗ ನಿಮಗೆ ಅತ್ಯಂತ ಉಚಿತವಾದ, ಕಡಿಮೆ ವೆಚ್ಚದ ಗಣಕ ಸಂಪಾದನೆಯ ವಿಧಾನವನ್ನು ಆರಿಸಿಕೊಳ್ಳಬೇಕು. ನೇರವಾಗಿ ನೀವು ಗಣಕ ಕೊಳ್ಳಬಹುದು, ಇಲ್ಲವೇ ಗುತ್ತಿಗೆಗೆ ಪಡೆಯಬಹುದು. ಕೊಳ್ಳಲು ಮೂಲತಃ ಅಗಾಧ ಹಣ ಬೇಕು. ಆದರೆ ಇದರಿಂದ ನೀವು ಸ್ವತಂತ್ರರಾಗುತ್ತೀರಿ. ತೆರಿಗೆಯ ವಿನಾಯಿತಿಯೂ ದೊರಕಬಹುದು. ಮೂರು ನಾಲ್ಕು ವರ್ಷಗಳೊಳಗೆ ಅದನ್ನು ನೀವು ಪೂರ್ಣವಾಗಿ ಬಳಸಿಕೊಳ್ಳಬಹುದೆನಿಸಿದರೂ ಕೊಳ್ಳುವುದು ಮೇಲು. ಅಗತ್ಯವಾದ ಸಿಬ್ಬಂದಿಗೆ ತರಬೇತು ನೀಡಬೇಕು. ಕೊಳ್ಳದಿದ್ದರೆ ಅದನ್ನು ಗುತ್ತಿಗೆಗೆ (ಲೀಸ್) ಪಡೆಯಬಹುದು. ಆದರೆ ಇದಕ್ಕಾಗಿ ಮೂರು ನಾಲ್ಕು ವರ್ಷಗಳಲ್ಲಿ ನೀವು ಕೊಡುವ ಹಣ ಹೊಸ ಗಣಕದ ಬೆಲೆಗೇ ಸಮನಾಗಬಹುದು. ಹಾಗಿದ್ದರೆ

ಕೊಳ್ಳುವುದೇ ಮೇಲು. ಗಣಕವನ್ನು ಪೂರ್ಣವೇಳೆ ಬಳಸಿಕೊಳ್ಳುವ ಸಾಧ್ಯತೆ ಇಲ್ಲದಿದ್ದರೆ ಗೊತ್ತಾದ ವೇಳೆಗೆ ಬಾಡಿಗೆಗೆ ಪಡೆಯಬಹುದು. ಗಣಕದ ಸಲಹೆಗಾರರೊಂದಿಗೆ ಒಪ್ಪಂದ ಮಾಡಿಕೊಂಡು ಅವರ ಸೇವೆ ಪಡೆಯಬಹುದು. ಆದರೆ ಈ ರೀತಿ ಹೊರಗಡೆ ದತ್ತಾಂಶ ಪ್ರಕ್ರಮ ಮಾಡಿಸಿಕೊಳ್ಳುವುದರಿಂದ ಗಣಕದ ಬಳಕೆಯ ಪೂರ್ಣಫಲ ನಿಮಗೆ ದೊರಕದು, ಅದರ ಉಪೋತ್ಪನ್ನಗಳು ಲಭ್ಯವಾಗವು, ಸದಾ ಗಣಕದ ಸಾನ್ನಿಧ್ಯದಲ್ಲಿದ್ದಾಗ ಹೊಸ ಹೊಸ ಪ್ರಯೋಜನಗಳು ಹೊಳೆದಾವು. ಒಂದೇ ಬಗೆಯ ಸೇವೆ ಸಲ್ಲಿಸುವ ಹಲವು ಸಂಸ್ಥೆಗಳು ಸಹಕರಿಸಿ ಗಣಕವನ್ನು ಸ್ಥಾಪಿಸಿ ಸಹಕಾರ ತತ್ತ್ವದ ಮೇಲೆ ಅದರ ವೆಚ್ಚವನ್ನೂ ಪ್ರಯೋಜನವನ್ನೂ ಹಂಚಿಕೊಳ್ಳಬಹುದು. ದೊಡ್ಡ ನಗರಗಳಲ್ಲಿ ಇದು ಸಾಧ್ಯ. ಒಟ್ಟಿನಲ್ಲಿ ಸರಿಯಾದ ಗಣಕದ ಆಯ್ಕೆ ಅತ್ಯಂತ ಮುಖ್ಯವಾದ್ದು.

ಯಾವುದೇ ಹೊಸ ವ್ಯವಸ್ಥೆಯನ್ನು ಜಾರಿಗೆ ತರುವಾಗ ಅಂಥ ಬದಲಾವಣೆಗೆ ವಿರೋಧ ಇದ್ದೇ ಇರುತ್ತದೆ. ಯಥಾಸ್ಥಿತಿ ಮುಂದುವರಿಕೆಯಿಂದ ಹಿಂಸೆ ಇರುವುದಿಲ್ಲವೆಂಬುದು ಒಂದು ಕಾರಣ. ಉದ್ಯೋಗ ಪರಿಸ್ಥಿತಿಯ ಮೇಲೆ ಪರಿಣಾಮ ಉಂಟಾಗಬಹುದೆಂಬ ಅಂಜಿಕೆ ಇನ್ನೊಂದು ಕಾರಣ. ಯಂತ್ರಗಳು ಬಂದಾಗಲೂ ಇಂಥ ವಿರೋಧವಿತ್ತು. ಹತ್ತು ಜನ, ನೂರು ಜನ ಮಾಡುವ ಕೆಲಸವನ್ನು ಒಂದು ಯಂತ್ರ ಮಾಡುವುದಾದರೆ, ಅದನ್ನು ಒಬ್ಬ ನಿರ್ವಹಿಸಬಹುದಾದರೆ, ಉಳಿದ ಒಂಬತ್ತು ಜನಕ್ಕೋ ತೊಂಬತ್ತೊಂಬತ್ತು ಜನಕ್ಕೋ ಕೆಲಸ ಇಲ್ಲದಂತಾಗದೆ ? ಆದರೆ ಯಂತ್ರದಿಂದ ಉತ್ಪಾದನೆ ಹೆಚ್ಚಿ, ಆರ್ಥಿಕ ಚಟುವಟಿಕೆ ಹಿಗ್ಗಿ, ಹೊಸಹೊಸ ಉದ್ಯೋಗಗಳ ಸೃಷ್ಟಿಯಾಗುವ ಸಾಧ್ಯತೆಯೂ ಇಲ್ಲದಿಲ್ಲ. ಹಿಂದೆಲ್ಲಾ ಹೀಗೆ ಆಗಿರುವ ಅನುಭವವುಂಟು. ಸ್ವಯಂಚಲೀ ವ್ಯವಸ್ಥೆ—ಗಣಕ ವ್ಯವಸ್ಥೆ—ಬಂದಾಗ ವ್ಯವಹಾರಗಳು ಸುಗಮವಾಗಿ, ಶೀಘ್ರವಾಗಿ, ಗ್ರಾಹಕರಿಗೆ ಬೇಗ ಸೇವೆ ಸಂದು, ತೀರ್ಮಾನ ಕೈಗೊಳ್ಳುವುದು ಸುಲಭವಾಗಿ, ಅದಕ್ಕನುಗುಣವಾಗಿ ಸೇವಾ ಕ್ಷೇತ್ರ, ಕಲಾಪಗಳ ವ್ಯಾಪ್ತಿ ವೈವಿಧ್ಯಗಳು ಬೆಳೆದು ಹೆಚ್ಚು ಜನಕ್ಕೆ ಹೊಸ ಬಗೆಯ ಉದ್ಯೋಗಗಳು ದೊರಕುವ ಸಾಧ್ಯತೆಯೂ ಇಲ್ಲದಿಲ್ಲ. ಸರಿಯಾಗಿ ಯೋಜಿಸಲಾದ ಕಾರ್ಯಕ್ರಮಗಳಿಂದ ಬದಲಾವಣೆಯ ಹಿಂಸೆಯನ್ನು ತಪ್ಪಿಸಬಹುದು. ಸಂಸ್ಥೆಯಲ್ಲಿರುವ ಜನಕ್ಕೆ ಅಸಮಾಧಾನವಾಗದ ರೀತಿಯಲ್ಲಿ ಹೊಸ ವ್ಯವಸ್ಥೆಯನ್ನು ಜಾರಿಗೆ ತರುವುದರಲ್ಲೇ ವ್ಯವಸ್ಥಾಪಕರ ಜಾಣ್ಮೆ ಇರುತ್ತದೆ.

ಗಣಕದ ವಿಚಾರವಾಗಿ ಇನ್ನೊಂದು ಎಚ್ಚರಿಕೆಯ ಮಾತನ್ನಿಲ್ಲಿ ಹೇಳಬೇಕು. ಗಣಕ ತಪ್ಪು ಮಾಡುವುದೇ ಎಂಬುದು ಪ್ರಶ್ನೆ. ನಮ್ಮ ಅಂಕಿಗಳು ಸರಿಯಾಗಿವೆ. ಆದರೆ ಗಣಕ ತಪ್ಪು ಮಾಡಿದೆ—ಎಂಬ ಉದ್ಗಾರವನ್ನು ಗಣಕದ ಬಳಕೆದಾರರು ಮಾಡುವುದುಂಟು. ಗಣಕ ತಪ್ಪು ಮಾಡದು. ಗಣಕದ್ದು ರಾಕ್ಷಸ ಜಾತಿ. ಎಷ್ಟೇ ಅಂಕಿಗಳನ್ನಾದರೂ ಅದು ಕಬಳಿಸಬಲ್ಲುದು. ಆದರೆ ಗಣಕ ವ್ಯವಸ್ಥೆಯ ವಿನ್ಯಾಸ, ಅಭಿವೃದ್ಧಿ ಮತ್ತು ಅನ್ವಯದ ಪ್ರತಿಯೊಂದು ಹಂತದಲ್ಲೂ ಮಾನವನ ಕೈ ಇದ್ದೇ ಇರಬೇಕು. ಗಣಕಕ್ಕೆ ಊಡಬೇಕಾದ ಅಗಾಧ ದತ್ತಾಂಶ ರಾಶಿಯ ಸಂಗ್ರಹಣೆಯಲ್ಲಿ ತಪ್ಪಿರಬಾರದು. ಎಲ್ಲೇ ತಪ್ಪಾದರೂ ಗಣಕ ಸರಿಯಾದ ಫಲಿತಾಂಶ ನೀಡದು. ಗಾಡಿಗೆ ಕಟ್ಟಿದ ಮೊಂಡು ಕುದುರೆಯ ಹಾಗೆ ಅದು ಚಲಿಸಲೊಲ್ಲದೆ ಹೋಗಬಹುದು. ಆದ್ದರಿಂದ ಗಣಕಕ್ಕೆ ಊಡಬೇಕಾದ ನಿವಿಷ್ಟಿಗಳನ್ನು ನಿಯಂತ್ರಣಕ್ಕೊಳಪಡಿಸಬೇಕು. ಗಣಕ ವ್ಯವಸ್ಥೆಯನ್ನು ಸರಿಯಾಗಿ ಬಳಸುವ ಬಗ್ಗೆ ಸಂಬಂಧಪಟ್ಟವರಿಗೆ ಯುಕ್ತವಾದ ಶಿಕ್ಷಣ ನೀಡಬೇಕು. ಆರಂಭದ ಹಂತದಲ್ಲಿ ಈ ವಿಚಾರಗಳಿಗೆಲ್ಲಾ ಗಮನ ನೀಡುವುದು ಅತ್ಯಗತ್ಯ. ಗಣಕದ ಅಳವಡಿಕೆಯ ಕಾರ್ಯಕ್ಕೆ ಸಂಬಂಧಿಸಿದಂತೆ ವ್ಯವಸ್ಥೆ ಹಾಗೂ ಪ್ರಕ್ರಮಗಳ ಸರಳೀಕರಣ, ಅಧೋರಚನೆಯ ನಿರ್ಮಾಣ, ಮಾಹಿತಿ ಸಂರಚನೆಯ ಸುಧಾರಣೆ, ಸರಿಯಾದ ಗಣಕ ವ್ಯವಸ್ಥೆಗಳ ಆಯ್ಕೆ ಇವೆಲ್ಲ ಮುಖ್ಯ. ಸಮಗ್ರವಾದ ಗಣಕ ವ್ಯವಸ್ಥೆಯನ್ನು ಜಾರಿಗೆ ತರಬೇಕು. ಇದು ಯಶಸ್ವಿಯಾಗಬೇಕಾದರೆ ವಿಭಿನ್ನ ವಿಭಾಗಗಳ ಸಮಗ್ರ ದೃಷ್ಟಿಯುಳ್ಳ ಪರಿಣತರ ತಂಡಕ್ಕೆ ಇದನ್ನು ಒಪ್ಪಿಸಿ ಇದರ ಶಿಸ್ತಿಗೆ ಎಲ್ಲವನ್ನೂ ಒಳಪಡಿಸಬೇಕು. ಈ ತಂಡಕ್ಕೆ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಪ್ರಮುಖ ಸ್ಥಾನ ನೀಡಬೇಕಾದ್ದೂ ಅಗತ್ಯ.

ನಾವು ಈಗ ಆಡುತ್ತಿರುವ ಮಾತೆಲ್ಲಾ ಸಾಮಾನ್ಯವಾದ ಗಣಕಗಳನ್ನು ಕುರಿತದ್ದು. ಇದುವರೆಗೆ ಗಣಕಗಳಲ್ಲಿ ಪ್ರಮುಖವಾಗಿ ನಾಲ್ಕು ಪೀಳಿಗೆಗಳಿವೆ (ಜನರೇಷನ್ಸ್). ಸ್ಮರಣೆ, ಪ್ರಕ್ರಮ ಸಾಮರ್ಥ್ಯ, ವೇಗ—ಈ ಮೂರು ವಿಚಾರಗಳಲ್ಲಿ ಒಂದು ಪೀಳಿಗೆಗಿಂತ ಇನ್ನೊಂದು ಪೀಳಿಗೆ ಉತ್ತಮತರದ್ದಾಗಿದೆ. ಅದಕ್ಕೆ ಅವುಗಳ ಭಾಷೆಗಳನ್ನೇ ಬಳಸಬೇಕು—ಫೋರ್ಟ್ರಾನ್ (Fortran), ಆಲ್ಗೋಲ್ (Algol) ಕೊಬೋಲ್ (Cobol), ಬೇಸಿಕ್ (Basic) ಮುಂತಾದವು ಈ ಭಾಷೆಗಳು. ನಾವು ಸಾಮಾನ್ಯವಾಗಿ ಮಾತಾಡುವ ಅಥವಾ ಬರೆಯುವ ಭಾಷೆಗಳು ಅವಕ್ಕೆ ಅರ್ಥವಾಗುವುದಿಲ್ಲ. ಅಲ್ಲದೆ ಅವು ಕೆಲವು ನಿರ್ದಿಷ್ಟ ಗಣಿತೀಯ ಹಾಗೂ ತಾರ್ಕಿಕ ಕಾರ್ಯಭಾರಗಳನ್ನು ಮಾತ್ರ ನಡಸಬಲ್ಲುವು, ಅದೂ ಅವಕ್ಕೆ ಆ ಸೂಚನೆ ನೀಡಿದಾಗ. ಇಂದಿನ ಗಣಕಗಳು ತಾವೇ ಆಲೋಚಿಸಲಾರವು, ಅವು ಸರ್ವಶಕ್ತವಲ್ಲ, ಮಾನವರು ನೀಡಿದ ಆದೇಶಗಳನ್ನು ಅವು ಪಾಲಿಸುತ್ತವೆ ಮಾತ್ರ.

ಜಪಾನ್, ಅಮೆರಿಕಾ ಮುಂತಾದ ದೇಶಗಳು ಈಗ ಐದನೆಯ ಪೀಳಿಗೆಯ ಕಂಪ್ಯೂಟರಿನ ತಯಾರಿಕೆಯ ಹಾದಿಯಲ್ಲಿ ನಡೆಯುತ್ತಿವೆ. ಇದೊಂದು ಮಹಾಕ್ರಾಂತಿಯಾಗಿ ಪರಿಣಮಿಸಬಹುದು. ಮಾನವ ಮಿದುಳಿನಂತೆ ಇದು ಮಾಹಿತಿಯನ್ನು ತಾನೇ ಪ್ರಕ್ರಮಗೊಳಿಸಬಹುದು, ಅದನ್ನು ಅರ್ಥೈಸಬಹುದು, ಅಧುನಾತನಗೊಳಿಸಬಹುದು, ಅಳವಡಿಸಿಕೊಳ್ಳಬಹುದು, ವಿವಿಧ ಕ್ಷೇತ್ರಗಳ ನಡುವೆ ನೇರಸಂಬಂಧ ಕಲ್ಪಿಸಿ ಕಾರ್ಯ-ಕಾರಣ ಸಂಬಂಧವನ್ನು ಗುರುತಿಸಿ ಇದಮಿತ್ಥಂ ಎಂದು ಸ್ವಯಮೇವ ನಿರ್ಣಯ ಕೈಗೊಳ್ಳಬಹುದು. ವಿಜ್ಞಾನ ಕಾದಂಬರಿಯ ಅದ್ಭುತಗಳು ವಾಸ್ತವಿಕವಾಗಿ

ಸಂಭವಿಸಬಹುದು. ಇಂಥ ಗಣಕ ನಾವು ಆಡುವ ಭಾಷೆಯನ್ನೇ ಅರ್ಥಮಾಡಿಕೊಳ್ಳಬಹುದು. ಗಣಕಕ್ಕೆ ತಿಳಿಸಲು ಬಳಸಬೇಕಾದ ವಿಶಿಷ್ಟ ಭಾಷೆಯನ್ನು ಅರಿತಿರಬೇಕಾದ ಅಗತ್ಯವಿರದು. ಹಲವು ಪರಿಣತ ವ್ಯವಸ್ಥೆಗಳ ಸಂಕೀರ್ಣವಾಗಿ ಇದು ಕೆಲಸ ಮಾಡುವ ಸಾಧ್ಯತೆಯುಂಟು. ವೈದ್ಯ, ಹವಾಮಾನ, ಭೌತವಿಜ್ಞಾನ, ಹಣಕಾಸು, ರಸಾಯನವಿಜ್ಞಾನ, ಎಂಜಿನಿಯರಿಂಗ್, ಹೀಗೆ ಹಲವು ಕ್ಷೇತ್ರಗಳ ಪರಿಣತಿಯನ್ನು ಒಂದೇ ಯಂತ್ರ ಒಳಗೊಳ್ಳಬಲ್ಲುದು. ಒಂದು ಮಾನವ ಮಿದುಳಿಗೆ ಸಾಧ್ಯವಿಲ್ಲದ ರೀತಿ ಇದು ಕ್ಷಣಾರ್ಧದಲ್ಲಿ ಕೆಲಸ ಮಾಡಬಲ್ಲುದು. ತನ್ನ ಕಾರ್ಯವನ್ನು ತಾನೇ ನಿರ್ದೇಶಿಸುವುದಕ್ಕೂ ಇದು ಶಕ್ತವಾಗಿರುತ್ತದೆ. ಹಲವು ಭಾಷೆಗಳನ್ನು ಅರ್ಥಮಾಡಿಕೊಳ್ಳಬಲ್ಲ, ಅದದೇ ಭಾಷೆಯಲ್ಲಿ ಫಲಿತಾಂಶ ನೀಡಬಲ್ಲ, ತೀರ್ಮಾನ ತೆಗೆದುಕೊಳ್ಳಬಲ್ಲ, ಸಲಹೆ ನೀಡಬಲ್ಲ ಗಣಕ ಭಾರತದಂಥ ಬಹುಭಾಷಾದೇಶಕ್ಕೆ ತುಂಬ ಉಪಯುಕ್ತವಾಗಬಲ್ಲುದು. ಭಾಷೆಯ ಜಗಳವೇ ಅನಗತ್ಯವೆನಿಸಬಲ್ಲ ಅಂಥ ಕಾಲ ಬಂದರೂ ಬರಬಹುದು—ನಾವು ಈಗಿನಿಂದಲೇ ಜಾಣತನದ ಗಣಕ ವ್ಯವಸ್ಥೆಯ ಯೋಜನೆಯನ್ನು ಜಾರಿಗೆ ತಂದರೆ; ಜೊತೆಜೊತೆಗೇ ಸಂಶೋಧನೆಯೂ ಬೆಳೆದರೆ, ತಂತ್ರಜ್ಞಾನದ ನಿರ್ಮಾಣವಾದರೆ, ಆ ಕಾಲ ಬೇಗ ಬರಲೆಂದು ಹಾರೈಸಬಹುದಲ್ಲವೆ ?

---

## ಠೇವಣಿ ಸ್ವೀಕರಣ ಕಂಪನಿ (ಠೇಸ್ವಿಕಂ)

ಕೆನರಾ ಬ್ಯಾಂಕು, ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ ಮತ್ತು ಸಿಂಡಿಕೇಟ್ ಬ್ಯಾಂಕುಗಳು ಕೂಡಿ ಠೇವಣಿ ಸ್ವೀಕರಣ ಕಂಪನಿಯೊಂದನ್ನು (ಡಿಪಾಸಿಟ್ ಟೇಕಿಂಗ್ ಕಂಪನಿ) ಹಾಂಗ್‌ಕಾಂಗ್‌ನಲ್ಲಿ ಸ್ಥಾಪಿಸಲಿವೆ.

ಈ ಕಂಪನಿ 50,000 ಹಾಂಗ್‌ಕಾಂಗ್ ಡಾಲರ್ ಮೊಬಲಗಿನ ಕನಿಷ್ಠ ಠೇವಣಿಯನ್ನು ಸ್ವೀಕರಿಸುತ್ತದೆ. ಹಾಂಗ್‌ಕಾಂಗಿನಲ್ಲಿ ಇಂಥ ಇನ್ನೆರಡು ಕಂಪನಿಗಳು ಕಾರ್ಯನಿರತವಾಗಿವೆ. ಬ್ಯಾಂಕ್ ಆಫ್ ಬರೋಡ, ಇಂಡಿಯನ್ ಬ್ಯಾಂಕ್ ಮತ್ತು ಯೂನಿಯನ್ ಬ್ಯಾಂಕ್ ಆಫ್ ಇಂಡಿಯ ಈ ಬ್ಯಾಂಕುಗಳಿಂದ ಪ್ರವರ್ತಿತವಾದ ಒಂದು ಕಂಪನಿ ಮತ್ತು ಬ್ಯಾಂಕ್ ಆಫ್ ಇಂಡಿಯದಿಂದ ಪ್ರವರ್ತಿತವಾದ ಮತ್ತೊಂದು ಕಂಪನಿ ಈಗಾಗಲೆ ಕೆಲಸ ಮಾಡುತ್ತಿವೆ.

## ಹೊಸ ಠೇವಣಿ ಯೋಜನೆಗಳು

ಈ ವರ್ಷ ಜುಲೈ 30ರಿಂದ ನಾಲ್ಕು ವರ್ಷಗಳ ಅವಧಿಯ ಹೊಸ ಠೇವಣಿ ಯೋಜನೆಯನ್ನು ಸರ್ಕಾರ ಜಾರಿಗೆ ತಂದಿದೆ. ಒಂದು ಸರಣಿಯ ಠೇವಣಿಯ ಮೇಲೆ ಅರ್ಧವಾರ್ಷಿಕ ಬಡ್ಡಿಯನ್ನು ನೀಡಿದರೆ, ಮತ್ತೊಂದು ಸರಣಿಯ ಮೇಲೆ ಅರ್ಧವಾರ್ಷಿಕ ಬಡ್ಡಿಯನ್ನು ಚಕ್ರಬಡ್ಡಿಯಾಗಿ ಪರಿವರ್ತಿಸಿ ಪಕ್ವವಾದಾಗ ಅಥವಾ ನಗದೀಕರಿಸಿದಾಗ ನೀಡಲಾಗುವುದು. ಈ ಠೇವಣಿಗಳಿಂದ ಬರುವ ಬಡ್ಡಿಗೆ ವರಮಾನ ತೆರಿಗೆ ಮತ್ತು ಸಂಪತ್ತು ತೆರಿಗೆಗಳಿಂದ ಯುಕ್ತವಾದ ರಿಯಾಯತಿಯುಂಟು.

# ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮ

ಸಿ. ಎಂ. ಶಾಂತವೀರಯ್ಯ

1960ರಲ್ಲಿ ದಕ್ಷಿಣ ಭಾರತದ ಅನುಸೂಚಿತ ಬ್ಯಾಂಕುಗಳಲ್ಲಿ ಒಂದಾದ ಕೇರಳ ಪಲಾಯಿ ಸೆಂಟ್ರಲ್ ಬ್ಯಾಂಕ್ ದಿವಾಳಿ ಆದ ಮೇಲೆ ಭಾರತ ಸರಕಾರ ಮತ್ತು ಭಾರತೀಯ ರಿಸರ್ವ್ ಬ್ಯಾಂಕು ಠೇವಣಿದಾರರ ಹಿತದೃಷ್ಟಿಯಿಂದ ಮತ್ತು ಬ್ಯಾಂಕುಗಳಲ್ಲಿ ಜನಸಾಮಾನ್ಯರ ನಂಬುಗೆ ಹೆಚ್ಚಿಸಲು ಠೇವಣಿ ವಿಮಾ ಯೋಜನೆಯನ್ನು ಪ್ರಾರಂಭಿಸಲು ಯೋಚಿಸಿತು. ಈ ದಿಸೆಯಲ್ಲಿ ಭಾರತೀಯ ಠೇವಣಿ ವಿಮಾ ನಿಗಮ ಕುರಿತ ಸಂಸದೀಯ ಶಾಸನದನ್ವಯ ಜನವರಿ 1, 1962ರಿಂದ ಬ್ಯಾಂಕುಗಳ ಠೇವಣಿ ವಿಮಾ ಯೋಜನೆಯನ್ನು ಜಾರಿಗೊಳಿಸಲು ಭಾರತೀಯ ಠೇವಣಿ ವಿಮಾ ನಿಗಮವನ್ನು ಸ್ಥಾಪಿಸಿತು.

## ವ್ಯಾಪ್ತಿ

ಠೇವಣಿ ವಿಮಾ ಯೋಜನೆ ಭಾರತದ ಎಲ್ಲ ವಾಣಿಜ್ಯ ಬ್ಯಾಂಕುಗಳಿಗೆ ಅನ್ವಯಿಸುತ್ತದೆ. ಈ ಯೋಜನೆಯನ್ನು ರಾಜ್ಯ ಸಹಕಾರಿ ಬ್ಯಾಂಕುಗಳಿಗೂ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಗೂ ವಿಸ್ತರಿಸಲಾಗಿದೆ.

ಈ ಯೋಜನೆಯ ಸೌಲಭ್ಯ ವಿಮೆದಾರ ಬ್ಯಾಂಕುಗಳ (ಇನ್ಶ್ಯೂರ್ಡ್ ಬ್ಯಾಂಕ್) ಎಲ್ಲ ಠೇವಣಿದಾರರಿಗೂ ಸಿಗುತ್ತದೆ. —ಕೇಂದ್ರ ಮತ್ತು ರಾಜ್ಯ ಸರಕಾರ, ವಿದೇಶಿ ಸರಕಾರ ಮತ್ತು ವಾಣಿಜ್ಯ ಬ್ಯಾಂಕುಗಳ ಠೇವಣಿಗಳು ಈ ಯೋಜನೆಯ ವ್ಯಾಪ್ತಿಗೆ ಬರುವುದಿಲ್ಲ.

ಈ ಯೋಜನೆಯನ್ವಯ ಪ್ರತಿಯೊಬ್ಬ ಠೇವಣಿದಾರನಿಗೆ ರೂ. 30,000 ಗರಿಷ್ಠ ಮಿತಿಯವರೆಗೆ ಮಾತ್ರ ನಷ್ಟ ಭರ್ತಿಯಾಗುವುದು. ಠೇವಣಿದಾರರು ಹೆಚ್ಚು ಹೆಚ್ಚು ಹಣವನ್ನು ಉಳಿತಾಯ ಮಾಡಿ ಬ್ಯಾಂಕುಗಳಲ್ಲಿ ಠೇವಣಿ ಇಡಲು ಅವಕಾಶವಾಗುವಂತೆ ಕಾಲಕಾಲಕ್ಕೆ ಈ ಗರಿಷ್ಠಮಿತಿಯನ್ನು ಹೆಚ್ಚಿಸಲಾಗಿದೆ. ಈ ಮಿತಿ ಮೂಲತಃ ರೂ. 1,500ಗಳಿಂದ ಆರಂಭವಾಗಿ 1-1-68ರ ವೇಳೆಗೆ ತಲಾ ರೂ. 5,000 ಗಳಿಗೂ, 1-4-70ರಿಂದ ರೂ. 10,000 ಗಳಿಗೂ, 1-7-76ರಿಂದ ರೂ. 20,000 ಗಳಿಗೂ ಮತ್ತು 1-7-80ರಿಂದ ರೂ. 30,000 ಗಳಿಗೂ ಹೆಚ್ಚಿದೆ.

ವಿಮಾದಾರ ಬ್ಯಾಂಕುಗಳು ತಮ್ಮ ಒಟ್ಟು ಠೇವಣಿಗಳ ಪ್ರತಿಶತ 4 ಪೈಸೆಯಂತೆ ಪ್ರತಿ ಆರು ತಿಂಗಳುಗಳಿಗೊಮ್ಮೆ ವಿಮಾ ಕಂತನ್ನು ಕಟ್ಟಬೇಕಾಗುವುದು.

ಈ ನಿಗಮದಲ್ಲಿ ಎರಡು ನಿಧಿಗಳಿರುತ್ತವೆ :

1 ಠೇವಣಿ ವಿಮಾ ನಿಧಿ ಮತ್ತು 2 ಸಾಮಾನ್ಯ ನಿಧಿ.

ವಿಮಾ ಕಂತಿನ ಹಣದ ಆದಾಯವನ್ನು ಠೇವಣಿ ವಿಮಾ ನಿಧಿಗೆ ಜಮಾ ಮಾಡಿ ಕೇಂದ್ರ ಸರಕಾರದ ಪ್ರತಿಭೂತಿಗಳಲ್ಲಿ ವಿನಿಯೋಜಿಸಿ ಬಂದ ಆದಾಯವನ್ನು ನಿಧಿಯ ರಾಜಸ್ವ ಖಾತೆಗೆ ಜಮಾ ಮಾಡಲಾಗುತ್ತದೆ ಮತ್ತು ಠೇವಣಿ ನಷ್ಟ ಪರಿಹಾರವನ್ನು ಇದೇ ಖಾತೆಗೆ ಖರ್ಚು ಹಾಕಲಾಗುತ್ತದೆ. ನಿಗಮದ ಇತರ ವೆಚ್ಚವನ್ನು ಸಾಮಾನ್ಯ ನಿಧಿಯಿಂದ ಬಳಸಲಾಗುತ್ತದೆ.

## ಉದರಿ ಖಾತರಿ ಸಂಸ್ಥೆ

ಠೇವಣಿದಾರರ ಹಿತದೃಷ್ಟಿಯಿಂದ ಠೇವಣಿ ವಿಮಾ ನಿಗಮವನ್ನು ಸ್ಥಾಪಿಸಲಾಯಿತು. ಆದರೆ ಜನಸಾಮಾನ್ಯರ ಠೇವಣಿಯಿಂದಲೇ ಬಂದ ಹಣವನ್ನು ಸಾಲನೀಡಿ ಹಣ ಗಳಿಸುವ ಸಂಸ್ಥೆಗಳಿಗೆ ಸಾಲ ಮರುಪಾವತಿಯಲ್ಲಿ ಆಗುವ ನಷ್ಟವನ್ನು ಪರಿಹರಿಸಲು ಮತ್ತು ಉದರಿ ನೀಡುವ ಸಂಸ್ಥೆಗಳಿಂದ ಸಣ್ಣ ಗಾತ್ರದ ಕೈಗಾರಿಕೆಗಳಿಗೆ ಸುಲಭವಾಗಿ ಸಾಲ ದೊರಕಿಸಲು 1960ರ ಜುಲೈಯಲ್ಲಿ ಭಾರತ ಸರಕಾರ ಉದರಿ ಖಾತರಿ ಯೋಜನೆಯನ್ನು ಪ್ರಾರಂಭಿಸಿತು. ಭಾರತೀಯ ರಿಸರ್ವ್ ಬ್ಯಾಂಕು ಭಾರತ ಸರಕಾರದ ಪ್ರತಿನಿಧಿಯಾಗಿ ಈ ಯೋಜನೆಯನ್ನು ನಿರ್ವಹಿಸುತ್ತ ಬಂದಿದೆ. ಉದರಿ ನೀಡುವ ಸಂಸ್ಥೆಗಳು ಕೇವಲ ಸಣ್ಣ ಗಾತ್ರದ ಕೈಗಾರಿಕೆಗಳಿಗೆ ನೀಡಿದ ಸಾಲದ ಮರುಪಾವತಿಯಲ್ಲಿ ಆದ ನಷ್ಟವನ್ನು ಉದರಿ ಖಾತರಿ ಸಂಸ್ಥೆ ಭರ್ತಿ ಮಾಡುತ್ತದೆ.

ಇದೇ ರೀತಿ ಆದ್ಯತಾ ಮತ್ತು ಅಲಕ್ಷಿತ ವಲಯಗಳಿಗೆ ಸುಲಭವಾಗಿ ಸಾಲ ಸಿಗುವಂತೆ ಮಾಡಲು 1971ರ ಜನವರಿಯಲ್ಲಿ ಭಾರತೀಯ ರಿಸರ್ವ್ ಬ್ಯಾಂಕು 1956ರ ಕಂಪನಿಗಳ ಅಧಿನಿಯಮದ ಪ್ರಕಾರ ಭಾರತೀಯ ಉದರಿ ಖಾತರಿ ನಿಗಮ ಎಂಬ ಸಂಸ್ಥೆಯನ್ನು ಉದರಿ ನೀಡುವ ಸಂಸ್ಥೆಗಳು ಆದ್ಯತಾ ಮತ್ತು ಅಲಕ್ಷಿತ ವಲಯಗಳಲ್ಲಿ ನೀಡುವ ಸಾಲ ಮರುಪಾವತಿ ರಕ್ಷಣೆಗಾಗಿ ಸ್ಥಾಪಿಸಲಾಯಿತು.

ಹೀಗೆ ಠೇವಣಿದಾರರ ಹಿತದೃಷ್ಟಿಯಿಂದ ಠೇವಣಿ ವಿಮಾ ನಿಗಮ (ಡಿಐಸಿ) ಸಣ್ಣ ಗಾತ್ರದ ಕೈಗಾರಿಗಳ ಸಾಲ ಮರುಪಾವತಿ ನಷ್ಟವನ್ನು ತುಂಬಲು ಉದರಿ ಖಾತರಿ ಸಂಸ್ಥೆ (ಸಿಜಿಓ) ಮತ್ತು ಆದ್ಯತಾ ಮತು ಅಲಕ್ಷಿತ ವಲಯಗಳ ಸಾಲ ಮರುಪಾವತಿ ನಷ್ಟವನ್ನು ತುಂಬಲು ಉದರಿ ಖಾತರಿ ನಿಗಮ (ಸಿಜಿಸಿ) ಎಂಬ ಮೂರು ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿದ್ದುವು.

## ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮ

1978ರ ಠೇವಣಿ ವಿಮಾ ನಿಗಮ ತಿದ್ದುಪಡಿ ಮತ್ತು ಇತರ ಉಪಬಂಧಗಳ ಅಧಿನಿಯಮದ ಪ್ರಕಾರ ಉದರಿ ಖಾತರಿ ನಿಗಮವನ್ನು (ಸಿಜಿಸಿ) ಭಾರತೀಯ ಠೇವಣಿ ವಿಮಾ ನಿಗಮದೊಂದಿಗೆ (ಡಿಐಸಿಐ) 1978 ಜುಲೈ 15ರಂದು ವಿಲೀನಗೊಳಿಸಿ ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮವನ್ನು ಸ್ಥಾಪಿಸಲಾಯಿತು.

ಈ ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮದ ಅಧಿಕೃತ ಬಂಡವಾಳ ರೂ. 15 ಕೋಟಿ. ಇದರಲ್ಲಿ ಪಾವತಿಯಾದ ಬಂಡವಾಳ ರೂ. 10 ಕೋಟಿ. ಈ ಬಂಡವಾಳವನ್ನು ಪೂರ್ತಿಯಾಗಿ ಭಾರತೀಯ ರಿಸರ್ವ್ ಬ್ಯಾಂಕು ವಿನಿಯೋಜಿಸಿರುತ್ತದೆ.

ಈ ನಿಗಮದಲ್ಲಿ ಈ ಮುಂದಿನ ಮೂರು ನಿಧಿಗಳಿರುತ್ತವೆ: 1 ಠೇವಣಿ ವಿಮಾ ನಿಧಿ, 2 ಉದರಿ ಖಾತರಿ ನಿಧಿ ಮತ್ತು 3 ಸಾಮಾನ್ಯ ನಿಧಿ.

ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮ ಭಾರತದ ಉದರಿ ನೀಡುವ ಸಂಸ್ಥೆಗಳ ಸಾಲ ಮರುಪಾವತಿಯಲ್ಲಿ ಆಗುವ ನಷ್ಟಗಳನ್ನು ಭರ್ತಿಮಾಡುವ ಅಧಿಕಾರ ಹೊಂದಿರುತ್ತದೆ. ಉದರಿ ನೀಡುವ ಸಂಸ್ಥೆಗಳೆಂದರೆ ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು ಮತ್ತು 1934ರ ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮದ 45ನೆಯ ಪ್ರಕರಣದಲ್ಲಿ ನಮೂದಿತವಾದ ಉದರಿ ನೀಡುವ ಸಂಸ್ಥೆಗಳು. ಉದರಿ ಎಂದರೆ ನಗದುದರಿ, ಮೀರೆಳತ, ಹುಂಡಿ ಕೊಳ್ಳುವ ಹಾಗೂ ವಟಾಯಿಸುವ ಮಿತಿ, ಕಾಲಾವಧಿ ಸಾಲ ಮತ್ತು ಖಾತರಿಗಳು (ಕಾರ್ಯಪಾಲನೆ ಖಾತರಿಗಳ ಹೊರತಾಗಿ). ಉದರಿ ಖಾತರಿ ನಿಗಮದಲ್ಲಿದ್ದ ಈ ಕೆಳಗೆ ನಮೂದಿಸಿದ ಮೂರು ಯೋಜನೆಗಳನ್ನು ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮ ಮುಂದುವರಿಸಿಕೊಂಡು ಹೋಗುತ್ತಿದೆ: 1) 1971ರ ಸಣ್ಣ ಸಾಲಗಳ ಖಾತರಿ ಯೋಜನೆ, 2) 1971ರ ಹಣಕಾಸು ನಿಗಮ ಖಾತರಿ ಯೋಜನೆ ಮತ್ತು 3) 1971ರ ಸೇವಾ ಸಹಕಾರ ಸಂಘಗಳ ಖಾತರಿ ಯೋಜನೆ.

ಇವುಗಳಲ್ಲಿ ಸಣ್ಣಸಾಲಗಳ ಖಾತರಿ ಯೋಜನೆ ಒಟ್ಟು ನಿಗಮದ ಖಾತರಿಪೂರ್ಣ ಮುಂಗಡಗಳಲ್ಲಿ ಸೇಕಡ 99.5 ರಷ್ಟನ್ನು ಹೊಂದಿರುತ್ತದೆ.

ವಾಣಿಜ್ಯ ಬ್ಯಾಂಕುಗಳು ಮತ್ತು ಇತರ ಹಣಕಾಸು ಸಂಸ್ಥೆಗಳು ನೀಡುವ ಸಣ್ಣ ಗಾತ್ರದ ಕೈಗಾರಿಕೆ ಸಾಲಗಳ ನಷ್ಟವನ್ನು 1981ರ ಮಾರ್ಚ್ ವರೆಗೆ ಉದರಿ ಖಾತರಿ ಸಂಸ್ಥೆ (ಸಿಜಿಐ) ಇತರ ಸಣ್ಣವ್ಯಾಪಾರ ಹಣಕಾಸು ಕೃಷಿ ಮತ್ತು ಸಾರಿಗೆ ನಿರ್ವಾಹಕರ ಸಾಲ ಮರುಪಾವತಿಯಲ್ಲಿ ಆಗಬಹುದಾದ ನಷ್ಟಗಳ ಭರ್ತಿಯನ್ನು ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮ ಮಾಡುತ್ತ ಬಂದಿರುತ್ತದೆ.

1981ರ ಏಪ್ರಿಲ್ 1ರಂದು ಭಾರತ ಸರಕಾರ ಉದರಿ ಖಾತರಿ ಸಂಸ್ಥೆಯ ಸಣ್ಣ ಗಾತ್ರದ ಕೈಗಾರಿಕೆಗಳ ಉದರಿ ಖಾತರಿ ಯೋಜನೆಯನ್ನು ಹಿಂತೆಗೆದುಕೊಂಡು ಅದನ್ನು ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮ ವಹಿಸಿಕೊಳ್ಳುವಂತೆ ಆದೇಶ ನೀಡಿತು. 1971ರ ಸಣ್ಣ ಸಾಲಗಳ ಯೋಜನೆಯಂತೆ ಸಣ್ಣ ಸಾಲಗಳ (ಸಣ್ಣ ಗಾತ್ರದ ಕೈಗಾರಿಕೆಗಳ) ಖಾತರಿ ಯೋಜನೆ 1981 ಎಂಬ ಹೊಸ ಯೋಜನೆಯನ್ನು ರೂಪಿಸಿತು ಮತ್ತು ಹಳೆ ಯೋಜನೆಯನ್ವಯ ಖಾತರಿಗೊಳಿಸಿದ ಸಾಲಗಳನ್ನು ಕೆಲವು ನಿರ್ದಿಷ್ಟ ಷರತ್ತುಗಳೊಂದಿಗೆ ಠೇವಣಿ ಮತ್ತು ಉದರಿ ಖಾತರಿ ನಿಗಮವೇ ನಿರ್ವಹಿಸುವಂತೆ ಆದೇಶ ನೀಡಿತು.

**ಗುರಿ, ಅರ್ಹತೆ:** ನಿಗಮದ ಗುರಿ, ಮತ್ತು ಖಾತರಿ ಪಡೆಯಲು ಇರಬೇಕಾದ ಅರ್ಹತೆಗಳು.

**ಅರ್ಹ ಸಾಲಗಾರ:** ಯಾವುದೇ ವ್ಯಕ್ತಿ, ಪಾಲುದಾರಿಕೆ ಸಂಸ್ಥೆ, ಸಹಕಾರಿ ಸಂಘ, ಖಾಸಗಿ ಅಥವಾ ಸಾರ್ವಜನಿಕ ಕಂಪನಿಗಳು ಉದರಿ ನೀಡುವ ಸಂಸ್ಥೆಗಳಿಂದ ಸಾಲ ಪಡೆದಿರಬೇಕು.

**ಅರ್ಹ ಉದ್ದೇಶ:** ಸಾಲವನ್ನು ಭೂಮಿ, ಯಂತ್ರ ಸ್ಥಾವರ, ವಾಹನಗಳು ಮತ್ತು ಇತರ ಸ್ಥಿರಾಸ್ತಿಗಳನ್ನು ಕೊಳ್ಳಲು, ದುರಸ್ತಿಮಾಡಿಸಲು, ಬದಲಾಯಿಸಲು, ಸಿದ್ಧವಸ್ತುಗಳನ್ನು ತಯಾರಿಸಲು ಮತ್ತು ಮಾರಲು ಬೇಕಾಗುವ ದುಡಿಯುವ ಬಂಡವಾಳಕ್ಕಾಗಿ ಪಡೆದಿರಬೇಕು.

**ಅರ್ಹ ಉದರಿ ಸೌಕರ್ಯ:** ನಗದುದರಿ, ಮೀರೆಳತ, ಹುಂಡಿ ಖರೀದಿ ಮತ್ತು ವಟಾವಣೆ, ಕಂತು ಉದರಿ, ತಳ್ಳಿಟ್ಟ ಪಾವತಿ ಖಾತರಿ, ದುಡಿಯುವ ಬಂಡವಾಳ, ಹಣಕಾಸು ಖಾತರಿ ಇತ್ಯಾದಿಗಳಾಗಿರಬಹುದು. ಸರಕಾರ, ವಿಮಾ ಮತ್ತು ಇತರ ಯಾವ ಸಂಸ್ಥೆಗಳಿಂದಲೂ ಸಾಲ ಖಾತರಿ ಪಡೆದಿರಬಾರದು ಮತ್ತು ಒಂದು ಸಂಸ್ಥೆ ಅಥವಾ ಬ್ಯಾಂಕು ಕೊಟ್ಟ ಸಾಲವನ್ನು ಇನ್ನೊಂದು ಸಂಸ್ಥೆ ಅಥವಾ ಬ್ಯಾಂಕು ಆ ಸಾಲವನ್ನು ತೆಗೆದುಕೊಳ್ಳುವ ಮುಂಚೆ ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮದ ಪರವಾನಿಗೆಯನ್ನು ಹೊಂದಿರಬೇಕು.

**ಖಾತರಿಯ ವ್ಯಾಪ್ತಿ:** ಸಣ್ಣ ಗಾತ್ರದ ಕೈಗಾರಿಕೆ, ಸಣ್ಣ ವ್ಯಾಪಾರ ಹಣಕಾಸು ಮತ್ತು ಕೃಷಿ ಹಣಕಾಸುಗಳಿಗೆ ಖಾತರಿಯ ಮಿತಿ ಬೇರೆ ಬೇರೆ ಪ್ರಮಾಣಗಳಲ್ಲಿರುತ್ತದೆ.

**ಸಣ್ಣ ಗಾತ್ರದ ಕೈಗಾರಿಕೆ ಸಾಲಗಳ ನಷ್ಟಭರ್ತಿಯ ಪ್ರಮಾಣ**

ಅ) 1 ಸಾಲಗಾರನ ಒಟ್ಟು ಸಾಲ ಸೌಲಭ್ಯ ರೂ. 25,000ಕ್ಕೆ ಮೀರಿರಬಾರದು. 2 ಉದ್ಯಮಶೀಲರ ಯೋಜನೆಯನ್ವಯ ಸಾಲ ರೂ. 2 ಲಕ್ಷಕ್ಕೆ ಮೀರಿರಬಾರದು. ಇದನ್ನು ಮೀರಿದಲ್ಲಿ ಸಾಲ ನಷ್ಟದ ಮೊದಲ ರೂ. 2 ಲಕ್ಷವನ್ನು ಶೇ. 90 ರಂತೆಯೂ ಉಳಿದ ಸಾಲ ನಷ್ಟವನ್ನು ಶೇ. 50 ರಂತೆಯೂ ಕೊಡಲಾಗುವುದು. ಖಾತರಿ ಸಾಲ ನೀಡಿದ ಮೊದಲ 5 ವರ್ಷಗಳಲ್ಲಿ ಮಾತ್ರ ಈ ಹೆಚ್ಚುವರಿ ಸಿಗುತ್ತದೆ.

ಆ) ಸಾಲ ಮರುಪಾವತಿ ನಷ್ಟದ ಶೇ. 75 ಒಟ್ಟು ಸಾಲ ಸೌಲಭ್ಯಕ್ಕಿಂತ ಹೆಚ್ಚು ಮತ್ತು ರೂ. 2 ಲಕ್ಷಕ್ಕಿಂತ ಕಡಿಮೆಯಾಗಿರಬೇಕು.

ಇ) ಸಾಲ ರೂ. 2 ಲಕ್ಷಕ್ಕೆ ಮೀರಿದ್ದಲ್ಲಿ ಹಿಂದುಳಿದ ಜಿಲ್ಲೆಗಳಲ್ಲಿ ಶೇ. 66⅔ ಮತ್ತು ಇತರ ಕಡೆಗಳಲ್ಲಿ ಶೇ. 50 ಸಾಲ ಮರುಪಾವತಿ ನಷ್ಟವನ್ನು ಕೊಡಲಾಗುವುದು.

ಈ ಮೂರೂ ಸೇರಿದಂತೆ ಗರಿಷ್ಠ ನಷ್ಟದ ಭರ್ತಿ ರೂ. 10 ಲಕ್ಷವನ್ನು ಮೀರಬಾರದು.

ಈ ಯೋಜನೆಯನ್ವಯ ಸೌಲಭ್ಯ ಪಡೆಯುವ ಸಾಲಗಾರ ಉತ್ಪಾದನೆ, ಸಂಸ್ಕರಣ ಮತ್ತು ಸಂರಕ್ಷಣ ಕ್ರಿಯೆಯಲ್ಲಿ ತೊಡಗಿರಬೇಕು ಮತ್ತು ಯಂತ್ರಸ್ಥಾವರದಲ್ಲಿ ನಿಯೋಜಿಸಿದ ಹಣ ಸಣ್ಣ ಗಾತ್ರದ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ರೂ. 20 ಲಕ್ಷಕ್ಕೂ, ಸಹಾಯಕ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ರೂ. 25 ಲಕ್ಷಕ್ಕೂ ಮೀರಿರಬಾರದು.

1981ರ ಹೊಸ ಯೋಜನೆಯಲ್ಲಿ ಸಣ್ಣ ಮತ್ತು ಮಧ್ಯಮ ವೃತ್ತಪತ್ರಿಕೆಗಳು ಮತ್ತು ನಿಯತಕಾಲಿಕಗಳ ಪ್ರಕಾಶನ ಸಂಸ್ಥೆಗಳನ್ನೂ ಸೇರಿಸಿಕೊಳ್ಳಲಾಗಿದೆ. ಅನುಸೂಚಿತ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳವರಿಗೆ ಹಣಕಾಸು ಅಥವಾ ಹಣಕಾಸೇತರ ನೆರವುಗಳನ್ನು ನೀಡುವ ಸಂಘಸಂಸ್ಥೆಗಳು ಸಹ ಈ ಯೋಜನೆಯ ಅಡಿಯಲ್ಲಿ ಬರುತ್ತವೆ.

1971ರ ಸಣ್ಣ ಸಾಲಗಳ ಖಾತರಿ ಯೋಜನೆಯನ್ವಯ ವರ್ಗೀಕರಿಸಿದ, ಕೈಮಗ್ಗ ನೇಕಾರರು 1981ರ ಏಪ್ರಿಲ್‌ನಲ್ಲಿ ಸುಸ್ತಿ ಬಾಕಿದಾರರಾಗದಿದ್ದಲ್ಲಿ ಅವರನ್ನೂ 1981ರ ಸಣ್ಣ ಸಾಲಗಳ (ಸಣ್ಣ ಗಾತ್ರದ ಕೈಗಾರಿಕೆ) ಖಾತರಿ ಯೋಜನೆಯ ಅಡಿಯಿಂದ ತರಬಹುದಾಗಿದೆ. ಕಚ್ಚಾಸಾಮಗ್ರಿ ಮತ್ತು ಸಿದ್ಧವಸ್ತುಗಳ ಮೌಲ್ಯಾಂಕನದಲ್ಲಿ ತೊಡಗಿರುವ ಪ್ರಯೋಗಾಲಯಗಳು ಮತ್ತು ನವೀಕರಿಸುವ ಶಕ್ತಿಗಳನ್ನು ಉತ್ಪಾದಿಸುವ ಸಾಧನೆಗಳನ್ನು ತಯಾರಿಸುವ ಸಂಸ್ಥೆಗಳೂ ಈ ಯೋಜನೆಯ ಸೌಲಭ್ಯದ ವ್ಯಾಪ್ತಿಯಲ್ಲಿ ಬರುತ್ತವೆ.

**ಸಣ್ಣ ವ್ಯಾಪಾರದ ಹಣಕಾಸು ನಷ್ಟ ಭರ್ತಿಯ ಪರಿಮಿತಿ**

ಶೇ. 75 ರ ಸಾಲ ಮರುಪಾವತಿ ನಷ್ಟ ಅಥವಾ ಈ ಕೆಳಗೆ ಕಾಣಿಸಿದ ಗರಿಷ್ಠಮಿತಿ, ಇವೆರಡರಲ್ಲಿ ಕಡಿಮೆ ಇದ್ದ ಹಣವನ್ನು ನಿಗಮ ನಷ್ಟಭರ್ತಿಯಾಗಿ ನೀಡುವುದು :

* 1 ಸಣ್ಣ ವ್ಯಾಪಾರಿಗಳು (ಗೊಬ್ಬರ ವ್ಯಾಪಾರಿ ಹಾಗೂ ಖನಿಜ ತೈಲ ವ್ಯಾಪಾರಿಗಳ ಹೊರತಾಗಿ) ರೂ. 25,000/—

2 ಗೊಬ್ಬರ ಮತ್ತು ಖನಿಜ ತೈಲ ವ್ಯಾಪಾರಿಗಳು ರೂ. 75,000/—

** 3 ಸಾರಿಗೆ ನಿರ್ವಾಹಕರು ರೂ. 75,000/—

4 ಸ್ವಯಂ ಉದ್ಯೋಗ ಅಥವಾ ವೃತ್ತಿನಿರತರಿಗೆ ಒದಗಿಸಿದ ಯಂತ್ರೋಪಕರಣಗಳ ಸಾಲ ರೂ. 75,000/—

5 ವ್ಯಾಪಾರೋದ್ಯಮ ರೂ. 50,000/—

(ಮುಂದಿನ ಪುಟ ನೋಡಿ)

* ಸಣ್ಣ ಗೊಬ್ಬರ ಮತ್ತು ಖನಿಜ ತೈಲ ವ್ಯಾಪಾರಿಗಳ ವಾರ್ಷಿಕ ವಹಿವಾಟು ಅನುಕ್ರಮವಾಗಿ ರೂ. 4 ಲಕ್ಷ ಮತ್ತು ರೂ. 6 ಲಕ್ಷಕ್ಕೆ ಮೀರಿರಕೂಡದು.

** ಸಾರಿಗೆ ನಿರ್ವಾಹಕರು ಎರಡಕ್ಕಿಂತ ಹೆಚ್ಚಿಗೆ ವಾಹನಗಳನ್ನು ಹೊಂದಿರಬಾರದು.

ಕೃಷಿ ಹಣಕಾಸು ಸಾಲ ಮರುಪಾವತಿ ನಷ್ಟ ಭರ್ತಿಯ ಮಿತಿ

| ಉದರಿ ಸೌಕರ್ಯಗಳು | ಸಾಲ ತೀರಿಸಲು ನಿಗದಿಪಡಿಸಿದ ಅವಧಿ | ನಷ್ಟದ ಶೇಕಡ 75, ಗರಿಷ್ಟ ನಷ್ಟ ಭರ್ತಿ—ಇವೆರಡರಲ್ಲಿ ಕಡಿಮೆಯಾದದ್ದು |
|---|---|---|
| 1 ಬೆಳೆ ಸಾಲ | ಕಬ್ಬು–24 ತಿಂಗಳು<br>ಇತರ–15 ತಿಂಗಳು | ರೂ.<br>2500 |
| 2 ಅವಧಿ ಸಾಲ, ಅಭಿವೃದ್ಧಿ ಸಾಲ/ಯಂತ್ರೋಪಕರಣ ಮತ್ತು ಇತರ | 10 ವರ್ಷ | 10,000 |
| 3 ಬೆಳೆ ಸಾಲಗಳನ್ನು ಅವಧಿ ಸಾಲಗಳಾಗಿ ಪರಿವರ್ತಿಸಿದ್ದು | 10 ವರ್ಷ | 7,500 |
| 4 ಕೃಷಿ ಆಧಾರಿತ ಚಟುವಟಿಕೆಗಳು | 10 ವರ್ಷ | |
| ಮೀನುಗಾರಿಕೆ | | 37,500 |
| ರೇಷ್ಮೆ | | 18,750 |
| ಪಶುಸಂಗೋಪನೆ | | 1,500 |
| ಕೋಳಿಸಾಕಾಣೆ | | 22,500 |
| ಹೈನುಗಾರಿಕೆ | | 15,000 |
| 5 ಉಪಭೋಗ ಸಾಲಗಳು | 3 ವರ್ಷ | |
| ವೈದ್ಯಕೀಯ | | 250 |
| ವಿದ್ಯಾಭ್ಯಾಸ | | 100 |
| ಮದುವೆ | | 250 |
| ಧಾರ್ಮಿಕ ಕರ್ಮ | | 75 |
| ಅಂತ್ಯಸಂಸ್ಕಾರ | | 75 |
| 6 ಮನೆ ಖರೀದಿ/ಕಟ್ಟಿಸುವುದು ಅಥವಾ ಬಾಡಿಗೆಗಾಗಿ ಮನೆಗಳ ನಿರ್ಮಾಣ | 10 ವರ್ಷ | ನಿರ್ಮಾಣ ವೆಚ್ಚ ರೂ. 5,000ಕ್ಕೆ ಮೀರದಂತೆ |

ಈ ಆರು ಬಗೆಗಳ ಒಟ್ಟು ನಷ್ಟದ ಭರ್ತಿ ರೂ. 37,500/– ಮೀರಕೂಡದು.

## ನಗರೀಯ ಸಹಕಾರಿ ಬ್ಯಾಂಕುಗಳಿಗೊಂದು ಕೈಪಿಡಿ

ನಗರೀಯ ಸಹಕಾರಿ ಬ್ಯಾಂಕುಗಳು ವಿಭಿನ್ನವಾದ ಬ್ಯಾಂಕಿಂಗ್ ಚಟುವಟಿಕೆಗಳನ್ನು ವಿವೇಕಯುತವಾಗಿ ಕೈಗೊಳ್ಳುವಂತೆ ಸಾಲಗಳು ಮತ್ತು ಮುಂಗಡಗಳು, ಸಂಪನ್ಮೂಲಗಳ ಎತ್ತುವಳಿ, ನಿಧಿಗಳ ವ್ಯವಸ್ಥಾಪನೆ, ಗ್ರಾಹಕರ ಸೇವೆ ಮುಂತಾದವುಗಳ ಬಗ್ಗೆ ಭಾರತೀಯ ರಿಸರ್ವ್ ಬ್ಯಾಂಕು ಕೆಲವು ಮಾರ್ಗದರ್ಶಿ ಸೂತ್ರಗಳನ್ನು ವಿಧಿಸಿದೆ. ಈ ಎಲ್ಲ ಸೂತ್ರಗಳನ್ನು ಒಂದುಗೂಡಿಸಿ ಕೈಪಿಡಿಯಾಗಿ ಪ್ರಕಟಿಸಲಾಗಿದೆ. ನಗರೀಯ ಸಹಕಾರಿ ಬ್ಯಾಂಕುಗಳಿಗೆ ಈ ಕೈಪಿಡಿ ಸಹಾಯಕವಾಗಿದೆ.



# ಹೆಚ್. ದಾಸಪ್ಪ ಮತ್ತು ಮಕ್ಕಳು

ಅಬ್ಕಾರಿ ಗುತ್ತಿಗೆದಾರರು ಮತ್ತು

ಚಿತ್ರಮಂದಿರಗಳ ಮಾಲೀಕರು

ಳ೭೧, ೪ನೇ ಅಡ್ಡರಸ್ತೆ

ವಿಲ್ಸನ್ ಗಾರ್ಡನ್ಸ್

ಬೆಂಗಳೂರು ೫೬೦ ೦೨೭



# ಗುತ್ತಿಗೆ ಕಾರ್ಯಾಚರಣೆ : ಒಂದು ಪರಿಚಯ

ಕೆ. ಎನ್. ಮಹಾಬಲ

'ಕೈಗಾರಿಕೀಕರಣ ಇಲ್ಲವೇ ನಾಶ' ಎಂಬುದು ಇಂದು ಸುಸ್ಥಾಪಿತವಾದ ಒಂದು ಘೋಷಣೆ. ನಮ್ಮ ಒಟ್ಟಾರೆ ರಾಷ್ಟ್ರೀಯ ಉತ್ಪನ್ನ ಹೆಚ್ಚಿಸುವಲ್ಲಿ ಕೈಗಾರಿಕೆಗಳ ಪಾಲು ಗಣನೀಯವಾದುದು. ಹಾಗೆಂದೇ ನಮ್ಮ ಪಂಚವಾರ್ಷಿಕ ಯೋಜನೆಗಳಲ್ಲಿ ಅರ್ಥವ್ಯವಸ್ಥೆಯನ್ನು ಸುಭದ್ರ ಕೈಗಾರಿಕಾ ಬುನಾದಿಯ ಮೇಲೆ ನಿರ್ಮಿಸಲು ಸರ್ವಪ್ರಯತ್ನಗಳನ್ನೂ ಮಾಡಲಾಗುತ್ತಿದೆ.

ಇಂದು ಕೈಗಾರಿಕಾಕ್ಷೇತ್ರ ಬಂಡವಾಳದ ಕೊರತೆಗೆ ಒಳಗಾಗಿದೆ. ಬಂಡವಾಳದ ಕ್ರೋಡೀಕರಣ, ಹೀಗೆ ಸಂಗ್ರಹವಾದ ಬಂಡವಾಳದಿಂದ ಯಂತ್ರೋಪಕರಣಗಳನ್ನು ಕೊಳ್ಳುವುದು ಹಾಗೂ ಯಂತ್ರಸ್ಥಾವರವನ್ನು ಸ್ಥಾಪಿಸುವುದು ಕೈಗಾರಿಕೋದ್ಯಮಿಗಳಿಗೆ ದುಸ್ತರವಾದ ಹಾಗೂ ಕಾಲವ್ಯಯಕಾರಿಯಾದ ಕ್ರಿಯೆಯಾಗಿದೆ. ಮೇಲಾಗಿ ಈ ಸಂಬಂಧದಲ್ಲಿ ತಲೆಹಾಕುವ ಆಡಳಿತಾತ್ಮಕ, ಆರ್ಥಿಕ ಹಾಗೂ ತಾಂತ್ರಿಕ ತೊಡಕುಗಳನ್ನು ನಿವಾರಿಸಿಕೊಳ್ಳುವುದು ವಿಶೇಷವಾಗಿ ಸಣ್ಣ ಹಾಗೂ ಮಧ್ಯಮ ಗಾತ್ರದ ಕೈಗಾರಿಕೋದ್ಯಮಿಗಳಿಗೆ ಹೊರಲಾರದ ಹೊರೆಯಾಗಿದೆ. ತಂತ್ರಜ್ಞಾನ, ಮಾರಾಟಗಾರಿಕೆ, ವ್ಯವಸ್ಥಾಪನ ಮುಂತಾದ ಕ್ಷೇತ್ರಗಳಲ್ಲಿ ಹಲವಾರು ರೀತಿಯ ಸಂಶೋಧನೆ ಹಾಗೂ ಅಭಿವೃದ್ಧಿ ಕಂಡುಬಂದಿದ್ದರೂ, ಬಂಡವಾಳ ಸಂಪನ್ಮೂಲದ ಕ್ಷೇತ್ರದಲ್ಲಿ ಕಂಡುಬಂದ ಕೊರತೆಗೆ ಪರಿಹಾರ ಸೂಚಿಸುವಲ್ಲಿ ಆಗಿರುವ ಯತ್ನಗಳು ಅಸಮರ್ಪಕ ಎಂದೇ ಹೇಳಬಹುದು. ಸಾಂಪ್ರದಾಯಿಕ ಬ್ಯಾಂಕಿಂಗ್ ಕ್ಷೇತ್ರ ಹಾಗೂ ಅವಧಿ ಸಾಲ ನೀಡಿಕೆ ಸಂಸ್ಥೆಗಳು ಈ ಯತ್ನದಲ್ಲಿ ಸಾಕಷ್ಟು ತೊಡಗಿರುವುವು ಎಂಬುದು ನಿಜವಾದರೂ ಕೈಗಾರಿಕೆಗಳ ಬಂಡವಾಳ ಬೇಡಿಕೆಯನ್ನು ಪೂರೈಸುವಲ್ಲಿ ಅವುಗಳ ಪಾತ್ರ ಅಷ್ಟೇನೂ ಸಮೋನ್ವೇಷಕಾರಿಯಾಗಿಲ್ಲ.

ಈ ಸಮಸ್ಯೆಗೆ ಬದಲಿ ಪರಿಹಾರ ಸೂಚಿಸಲೋ ಎಂಬಂತೆ, ಹಲವಾರು ಪಾಶ್ಚಾತ್ಯದೇಶಗಳಲ್ಲಿ ಯಶಸ್ವಿಯಾಗಿ ಪ್ರಯೋಗ ಕಂಡಿದ್ದು, ಭಾರತದಲ್ಲೂ ಇಂದು ವ್ಯಾಪಕವಾಗಿ ಕಂಡುಬರುತ್ತಿರುವ ಪ್ರಕ್ರಿಯೆಯೊಂದು ಗಮನಾರ್ಹವಾದುದಾಗಿದೆ. ಅದೇ ಗುತ್ತಿಗೆ ಕಾರ್ಯಾಚರಣೆ (ಲೀಸಿಂಗ್ ಆಪರೇಷನ್) ಪರಿಕಲ್ಪನೆ. ಬಂಡವಾಳ ಮಾರುಕಟ್ಟೆಯನ್ನು ಕ್ರಿಯಾತ್ಮಕವಾಗಿ ಪ್ರವೇಶಿಸಿ ಎಲ್ಲರನ್ನೂ, ಮತ್ತು ವಿಶೇಷವಾಗಿ ವಿನಿಯೋಜಕರನ್ನು, ಕುತೂಹಲಕ್ಕೆ ಈಡು ಮಾಡಿರುವ ಗುತ್ತಿಗೆ ಪ್ರಕ್ರಿಯೆಯ ಕಾರ್ಯವಿಧಾನ, ಬೆಳವಣಿಗೆ, ಭವಸಾಮರ್ಥ್ಯ, ಉಪಯುಕ್ತತೆ ಮುಂತಾದ ವಿಷಯಗಳನ್ನು ಅರಿತುಕೊಳ್ಳುವುದು ಸ್ವಾರಸ್ಯಕರ ಹಾಗೂ ಉಪಯುಕ್ತವಾದುದಾಗಿದೆ.

**ಗುತ್ತಿಗೆ ಎಂದರೇನು?**

ಒಂದು ಪಕ್ಷದವನು (ಗುತ್ತಿಗೆದಾತ) ತನ್ನ ಸ್ಥಿರ ಆಸ್ತಿ/ಉಪಕರಣವನ್ನು ಮತ್ತೊಂದು ಪಕ್ಷದವನಿಗೆ(ಗುತ್ತಿಗೆದಾರ) ಒಂದು ಗೊತ್ತಾದ ಅವಧಿಗೆ ಮತ್ತು ಸಾಮಾನ್ಯವಾಗಿ ಒಂದು ನಿಗದಿತವಾದ ಬಾಡಿಗೆಯನ್ನು ಪಡೆದು ಎರವಲು ನೀಡುವ ಒಪ್ಪಂದವನ್ನು ಗುತ್ತಿಗೆ ಒಪ್ಪಂದ ಎನ್ನಬಹುದು. ಗುತ್ತಿಗೆ ವ್ಯವಹಾರದಲ್ಲಿ ತೊಡಗಿರುವ ಸಂಸ್ಥೆಯು ಆಸ್ತಿ/ಉಪಕರಣವನ್ನು ಕೊಂಡು ಅದನ್ನು ತನ್ನ ಗ್ರಾಹಕರೊಬ್ಬರಿಗೆ ಗುತ್ತಿಗೆಗೆ ನೀಡುತ್ತದೆ. ಗ್ರಾಹಕ ಅದನ್ನು ತನ್ನ ಉದ್ಯಮದಲ್ಲಿ ಬಳಸಿಕೊಳ್ಳಬಹುದು. ಇದಕ್ಕೆ ಪ್ರತಿಫಲವಾಗಿ ಗ್ರಾಹಕ (ಗುತ್ತಿಗೆದಾರ) ಬಾಡಿಗೆ ನೀಡುತ್ತಾನೆ. ಈ ಬಾಡಿಗೆಯ ಮೊತ್ತದಲ್ಲಿ ಗುತ್ತಿಗೆಯ ಅವಧಿಯಿಡೀ ಅನ್ವಯವಾಗುವ ಅಸಲು ಹಾಗೂ ಬಡ್ಡಿಯ ಭಾಗ ಅಡಕವಾಗಿರುತ್ತದೆ. ಗುತ್ತಿಗೆದಾರ ನೀಡಬೇಕಾಗಿರುವ ಬಾಡಿಗೆಯ ಮೊತ್ತವನ್ನು ಮೊದಲೇ ನಿರ್ಧರಿಸಿರಲಾಗಿರುತ್ತದೆ.

ನಿಗದಿತ ಅವಧಿ ತೀರಿದ ಅನಂತರ ಗುತ್ತಿಗೆದಾರ ಆ ಆಸ್ತಿ/ಉಪಕರಣವನ್ನು ಕಡಿಮೆಗೊಳಿಸಿದ ಬಾಡಿಗೆ ದರಕ್ಕೆ ತಾನೇ ಇಟ್ಟುಕೊಳ್ಳಬಹುದು. ಅಥವಾ ಪೂರ್ವನಿರ್ಧಾರಿತ ಒಪ್ಪಂದವೊಂದು ಇದ್ದಲ್ಲಿ ಆಸ್ತಿ/ಉಪಕರಣವನ್ನು ಮಾರಾಟ ಮಾಡಿ ಪ್ರತಿಫಲವನ್ನು ಗುತ್ತಿಗೆದಾತ ಹಾಗೂ ಗುತ್ತಿಗೆದಾರ ಇಬ್ಬರೂ ಉಭಯಸಮ್ಮತ ರೀತಿಯಲ್ಲಿ ಹಂಚಿಕೊಳ್ಳಬಹುದು. ಇಲ್ಲವೇ ಗುತ್ತಿಗೆದಾತ ಆ ಆಸ್ತಿ/ಉಪಕರಣದ ಉಳಿಕೆಯ ಸಾಮರ್ಥ್ಯದ ಅವಧಿಯನ್ನು (ರೆಸಿಡ್ಯುಯಲ್ ಕೆಪಾಸಿಟಿ ಪೀರಿಯಡ್) ಲೆಕ್ಕಹಾಕಿ ಮತ್ತೊಬ್ಬ ಗ್ರಾಹಕನಿಗೆ ಅದನ್ನು ಗುತ್ತಿಗೆಯ ಮೇಲೆ ನೀಡಬಹುದು.

### ಗುತ್ತಿಗೆಗೆ ನೀಡಲಾಗುವ ಉಪಕರಣಗಳು/ಆಸ್ತಿಗಳು

ಗುತ್ತಿಗೆಗೆ ನೀಡಲಾಗುವ ಆಸ್ತಿ/ಉಪಕರಣಗಳ-ಪಟ್ಟಿ ಬಹಳ ವ್ಯಾಪಕವಾದುದಾಗಿದೆ. ಗ್ರಾಹಕನ (ಗುತ್ತಿಗೆದಾರ) ಆವಶ್ಯಕತೆಗಳಿಗೆ ತಕ್ಕಂತೆ ವಾಣಿಜ್ಯ ವಾಹನದಿಂದ ಹಿಡಿದು ಎಣ್ಣೆಗಾಗಿ ಕೊರೆಯುವ ಯಂತ್ರದವರೆಗೆ, ಗಣಕದಿಂದ ಹಿಡಿದು ಬೃಹತ್ ಹಡಗಿನವರೆಗೆ, ಕಸದ ಬುಟ್ಟಿಯಿಂದ ಹಿಡಿದು ಕಛೇರಿ ಪೀಠೋಪಕರಣದವರೆಗೆ—ಹೀಗೆ ವಿಸ್ತೃತವಾದ ಶ್ರೇಣಿಯ ಉಪಕರಣಗಳನ್ನು ಗುತ್ತಿಗೆಗೆ ನೀಡಲಾಗುತ್ತದೆ.

### ಗುತ್ತಿಗೆ ಕಾರ್ಯಾಚರಣೆಯ ವಿಧಾನಗಳು

ಗುತ್ತಿಗೆ ಕಾರ್ಯಾಚರಣೆಯ ಎರಡು ಪ್ರಮುಖ ವಿಧಾನಗಳೆಂದರೆ :

1. ಹಣಕಾಸು ಗುತ್ತಿಗೆ (ಫೈನಾನ್ಸಿಯಲ್ ಲೀಸಿಂಗ್)
2. ಕಾರ್ಯಾಚರಣೆ ಗುತ್ತಿಗೆ (ಆಪರೇಟಿಂಗ್ ಲೀಸಿಂಗ್)

**ಹಣಕಾಸು ಗುತ್ತಿಗೆ:** ಈ ಪದ್ಧತಿಯಲ್ಲಿ ಗುತ್ತಿಗೆದಾತನ ಆಸ್ತಿಯ ಸಂಪೂರ್ಣ ಮಾಲೀಕತ್ವ, ಗುತ್ತಿಗೆದಾರ ಪಾವತಿ ಮಾಡುವ ಬಾಡಿಗೆಯ ಮೊತ್ತದ ಹರಿವಿನಿಂದ ಚುಕ್ತಾ ಆಗುತ್ತದೆ. ಅಂದರೆ ಕಡೆಯ ಬಾಡಿಗೆ ಕಂತಿನ ಪಾವತಿಯೊಡನೆ ಗುತ್ತಿಗೆದಾರನಿಗೆ ಸಂಪೂರ್ಣವಾಗಿ ಆಸ್ತಿಯ ವರ್ಗಾವಣೆಯಾಗುತ್ತದೆ. ಗುತ್ತಿಗೆದಾತ ಆಸ್ತಿ/ಉಪಕರಣದ ಉಳಿಕೆ ಮೌಲ್ಯ (ರೆಸಿಡ್ಯುಯಲ್ ವ್ಯಾಲ್ಯೂ) ವಿಷಯದಲ್ಲಾಗಲಿ ವಿಮೆ, ಸುಸ್ಥಿತಿ ಮುಂತಾದ ವಿಷಯದಲ್ಲಾಗಲಿ ಯಾವುದೇ ತೆರನಾದ ಜವಾಬ್ದಾರಿಯನ್ನೂ ಹೊರುವುದಿಲ್ಲ. ಬಾಡಿಗೆಯ ಮೊಬಲಗು ಹಾಗೂ ಮರುಪಾವತಿ ಅವಧಿಯು ಆಸ್ತಿಯ ಅಸಲು ಮೌಲ್ಯ ಹಾಗೂ ಬಡ್ಡಿಯ ಮೊತ್ತವನ್ನು ಅವಲಂಬಿಸಿರುತ್ತದೆ.

**ಕಾರ್ಯಾಚರಣೆ ಗುತ್ತಿಗೆ:** ಈ ವಿಧಾನದ ಅಡಿಯಲ್ಲಿ ಗುತ್ತಿಗೆದಾತ ಆಸ್ತಿ/ಉಪಕರಣಕ್ಕೆ ಸಂಬಂಧಿಸಿದ ಎಲ್ಲ ನಷ್ಟಸಂಭವವನ್ನೂ ಜವಾಬ್ದಾರಿಯನ್ನು ಹೊರುತ್ತಾನೆ, ಪ್ರತಿಫಲವಾಗಿ ಎಲ್ಲ ಲಾಭಗಳಿಗೂ ಹಕ್ಕುದಾರನಾಗಿರುತ್ತಾನೆ. ಕಾರ್ಯಾಚರಣೆ ಗುತ್ತಿಗೆಯಲ್ಲಿ ಗುತ್ತಿಗೆದಾತನಿಗೆ ಲಭ್ಯವಾಗುವ ಲಾಭ ಆಸ್ತಿ/ಉಪಕರಣ ತರಬಲ್ಲ ಉಳಿಕೆಯ ಮೌಲ್ಯವನ್ನು ಆಧರಿಸಿರುತ್ತದೆ. ಅವಧಿ ತೀರಿದ ಅನಂತರ ಆಸ್ತಿ/ಉಪಕರಣವನ್ನು ಮಾರಾಟ ಮಾಡಲು ಅಥವಾ ಮರುಗುತ್ತಿಗೆ ನೀಡಲು ಗುತ್ತಿಗೆದಾರನಿಗೆ ದ್ವಿತೀಯಕ ಮಾರುಕಟ್ಟೆಗಳನ್ನು (ಸೆಕಂಡರಿ ಮಾರ್ಕೆಟ್) ಕುರಿತ ವ್ಯಾಪಕ ಜ್ಞಾನ ಅಗತ್ಯವಾಗಿರುತ್ತದೆ. ಬಹಳ ಬೇಗ ರೂಢಿ ತಪ್ಪುವ ಗಣಕಗಳಂತಹವನ್ನು ಸಾಮಾನ್ಯವಾಗಿ ಕಾರ್ಯಾಚರಣೆ ಗುತ್ತಿಗೆಯಡಿ ಗುತ್ತಿಗೆಗೆ ನೀಡಲಾಗುವುದು.

**ಇತರ ವಿಧಗಳು:** ಇವೆರಡೇ ಅಲ್ಲದೆ ವಿದೇಶಗಳಲ್ಲಿ ವ್ಯಾಪಕವಾಗಿ ಬಳಕೆಗೊಳ್ಳುತ್ತಿದ್ದು ನಮ್ಮ ದೇಶದಲ್ಲಿ ಇನ್ನೂ ಪ್ರಯೋಗಾವಸ್ಥೆಯಲ್ಲಿರುವ ಗುತ್ತಿಗೆ ವಿಧಾನಗಳಲ್ಲಿ ಪ್ರಮುಖವಾದವುಗಳೆಂದರೆ :

**ವಿಕ್ರಯ ಹಾಗೂ ಪುನರ್ ಗುತ್ತಿಗೆ(ಸೇಲ್ ಅಂಡ್ ಲೀಸ್ ಬ್ಯಾಕ್):** ಈ ವಿಧಾನದಲ್ಲಿ ಒಬ್ಬ ವ್ಯಾಪಾರಿ ಆಸ್ತಿಯೊಂದನ್ನು ಕೊಂಡು ಅದನ್ನು ಗುತ್ತಿಗೆದಾತನಿಗೆ ವಿಕ್ರಯಿಸುತ್ತಾನೆ ಮತ್ತು ಅದೇ ಆಸ್ತಿಯನ್ನು ಗುತ್ತಿಗೆಗೆ ಪಡೆಯುತ್ತಾನೆ. ಇದರಿಂದ ಗುತ್ತಿಗೆದಾರನಿಗೆ ಆಸ್ತಿಯ ಮೌಲ್ಯ ಒಮ್ಮೆಲೇ ದೊರೆಯುತ್ತದೆ.

**ಬೃಹತ್ ಟಿಕೆಟ್ ಗುತ್ತಿಗೆ (ಬಿಗ್ ಟಿಕೆಟ್ ಲೀಸಿಂಗ್):** ಸೂಕ್ಷ್ಮತಮ ತಂತ್ರಜ್ಞಾನದ ಗಣಕ ವಿಧಾನಗಳು, ಬೃಹತ್ ನಿರ್ಮಾಣ ಯಂತ್ರಗಳು ಇಂತಹವುಗಳನ್ನು ಈ ವಿಧದಲ್ಲಿ ಗುತ್ತಿಗೆಗೆ ನೀಡಲಾಗುತ್ತದೆ.

**ಮೀಟು ಗುತ್ತಿಗೆ (ಲಿವರೇಜ್ ಲೀಸಿಂಗ್):** ಈ ವಿಧಾನದಲ್ಲಿ ಆಸ್ತಿ/ಉಪಕರಣದ ಸ್ವಲ್ಪ ಭಾಗವನ್ನು ಗುತ್ತಿಗೆದಾರ ಬಂಡವಾಳಕ್ಕಾಗಿ ನೀಡುತ್ತಾನೆ. ಉಳಿದ ಭಾಗವನ್ನು ಬಾಡಿಗೆಯ ರೂಪದಲ್ಲಿ ನೀಡುತ್ತಾನೆ.

**ತೆರಿಗೆ ಆಸರೆ ಗುತ್ತಿಗೆ (ಟ್ಯಾಕ್ಸ್ ಶೆಲ್ಟರ್ ಲೀಸಿಂಗ್):** ಕೆಲವು ನಿರ್ದಿಷ್ಟ ಕಾರಣಗಳಿಂದಾಗಿ ತೆರಿಗೆ ಪದ್ಧತಿಯ ಅಡಿ ಸಂಪೂರ್ಣ ಅನುಕೂಲ ಪಡೆಯಲಾಗದ ಉದ್ಯಮಿಗಳಿಗೆ ಸಹಾಯ ಮಾಡಲು ಗುತ್ತಿಗೆದಾತ ಗುತ್ತಿಗೆ ಕಾರ್ಯಾಚರಣೆಯಿಂದ ಹಲವಾರು ಸೌಲಭ್ಯಗಳನ್ನು ಪಡೆದು ತೆರಿಗೆ ಸೌಲಭ್ಯಗಳನ್ನು ಪಡೆದು ಅದನ್ನು ಗುತ್ತಿಗೆದಾರನಿಗೆ ವರ್ಗಾಯಿಸುತ್ತಾನೆ.

### ಗುತ್ತಿಗೆದಾತನ ಪ್ರಮುಖ ಕಾಳಜಿ

ಗುತ್ತಿಗೆ ನೀಡುವ ಪರಿಕ್ರಮ ಯಾವುದೇ ಇರಲಿ, ಗುತ್ತಿಗೆದಾತನ ಪ್ರಮುಖ ಕಾಳಜಿಯು, ಗುತ್ತಿಗೆದಾರನು ತನ್ನಿಂದ ಗುತ್ತಿಗೆ ಪಡೆದ ಯಂತ್ರ/ಉಪಕರಣವನ್ನು ಸಮರ್ಥವಾಗಿ ಹಾಗೂ ಲಾಭಕರವಾಗಿ ಉಪಯೋಗಿಸುವುದರ ಮೂಲಕ ಹೆಚ್ಚುವರಿ ನಗದು ಹರಿವು (Cash flow) ಉಂಟುಮಾಡುವುದು ; ತನ್ಮೂಲಕ ಗುತ್ತಿಗೆ ನೀಡಿದ ಆಸ್ತಿಯ ಮೌಲ್ಯ ಹಾಗೂ ಬಡ್ಡಿಯನ್ನು ಯಾವುದೇ ನಷ್ಟಕ್ಕೆ ಅವಕಾಶವಿಲ್ಲದ ರೀತಿಯಲ್ಲಿ ಹಿಂದಕ್ಕೆ ಪಡೆಯುವುದೇ ಆಗಿದೆ. ಈ ರೀತಿಯಲ್ಲಿ ಗುತ್ತಿಗೆದಾತನ ಅಳಿವು-ಉಳಿವು, ಲಾಭ-ನಷ್ಟ ಇವೆಲ್ಲವನ್ನೂ ನಿರ್ಧರಿಸುವವನು ಗುತ್ತಿಗೆದಾತನೇ.

### ಗುತ್ತಿಗೆ ಅವಧಿ

ತೊಡಗಿಸಿದ ಆಸ್ತಿಯ ಉಪಯುಕ್ತತೆ, ಕೈಗಾರಿಕೆಯ ಸಾಮಾನ್ಯ ಪ್ರವೃತ್ತಿ-ಲಕ್ಷಣ ಇವುಗಳನ್ನು ಗಮನದಲ್ಲಿಟ್ಟುಕೊಂಡು ಗುತ್ತಿಗೆದಾತನು ಆಸ್ತಿಯ ಅಸಲು ಮೌಲ್ಯ ಹಾಗೂ ಬಡ್ಡಿಯನ್ನು ಒಂದು ನಿಗದಿತ ಅವಧಿಯಲ್ಲಿ (ಉದಾಹರಣೆಗೆ ಮೂರು ವರ್ಷ, ಐದು ವರ್ಷ ಅಥವಾ ಹತ್ತು ವರ್ಷದಲ್ಲಿ) ಹಿಂಪಡೆಯಲು ನಿರೀಕ್ಷಿಸುತ್ತಾನೆ.

### ಪ್ರಧಾನ ಉದ್ದೇಶ

ವರಮಾನ ತೆರಿಗೆ ಪದ್ಧತಿಯಲ್ಲಿ ಕಂಡುಬರುವ ಓರೆ ಕೋರೆಗಳ ವ್ಯವಸ್ಥಿತ ಹಾಗೂ ಕಾನೂನುಬದ್ಧ ಉಪಯೋಗ ಪಡೆಯುವುದೇ ಗುತ್ತಿಗೆ ಕಾರ್ಯಾಚರಣೆಯ ಪ್ರಮುಖ ವಾದ ಉದ್ದೇಶವಾಗಿದೆ. ಇದು ಯಾವುದೇ ಗುತ್ತಿಗೆ ಕಂಪನಿಯ ವಿವರಣ ಪತ್ರವನ್ನು ಅಧ್ಯಯನ ಮಾಡಿದರೂ ವೇದ್ಯವಾಗುವ ವಿಷಯವಾಗಿದೆ. ವರಮಾನ ತೆರಿಗೆ ಅಧಿನಿಯಮದಡಿ ಲಭ್ಯವಿರುವ ತೆರಿಗೆ ರಜೆ ಹಾಗೂ ತೆರಿಗೆ ವಿನಾಯಿತಿಗಳನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳು ವುದರ ಮೂಲಕ ಈ ಉದ್ದೇಶಗಳನ್ನು ಈಡೇರಿಸಿಕೊಳ್ಳ ಲಾಗುತ್ತದೆ.

### ಗುತ್ತಿಗೆದಾತನಿಗೆ ಲಭ್ಯವಾಗುವ ಪ್ರಯೋಜನಗಳು

1 ಗುತ್ತಿಗೆದಾತನಿಗೆ ವರಮಾನ ತೆರಿಗೆ ಅಧಿನಿಯಮ 1961ರ 32ನೆಯ ಅನುಚ್ಛೇದದ ಅನ್ವಯ ಸಾಮಾನ್ಯವಾಗಿ ದೊರೆಯುವ ಇಳುವರಿಯ(Depreciation) ಜತೆಗೆ ಶೇಕಡ 50% ಹೆಚ್ಚುವರಿ ಇಳುವರಿ ದೊರೆಯುತ್ತದೆ. ಇದು 1,485ರ ಒಳಗೆ ಸ್ಥಾಪಿತವಾಗುವ ಯಂತ್ರಸ್ಥಾವರ ಹಾಗೂ ಯಂತ್ರೋಪಕರಣಗಳಿಗೆ ಅನ್ವಯವಾಗುತ್ತದೆ. ಇದಲ್ಲದೆ ಹಲಮಡಿ ಪಾಳಿ ಕಾರ್ಯಾಚರಣೆ (Multiple Shift Working) ಸಂಬಂಧದಲ್ಲಿ ನೀಡಲಾಗುವ ಹೆಚ್ಚುವರಿ ವಿನಾಯಿತಿಯ ಸೌಲಭ್ಯವನ್ನು ಗುತ್ತಿಗೆದಾತ ಪಡೆಯುತ್ತಾನೆ.

2 ಗುತ್ತಿಗೆಗೆ ನೀಡಲಾಗುವ ಯಂತ್ರೋಪಕರಣದ ವಿಷಯದಲ್ಲಿ, ವರಮಾನ ತೆರಿಗೆ 32A ಅನುಚ್ಛೇದದ ಅನ್ವಯ ಅವಕಾಶವಿರುವ ವಿನಿಯೋಜನೆ ವಿನಾಯಿತಿಗೂ (Investment allowance) ಗುತ್ತಿಗೆದಾತ ಅರ್ಹನಾಗಿರು ತ್ತಾನೆ.

### ಗುತ್ತಿಗೆದಾತ ಎದುರಿಸಬೇಕಾದ ನಷ್ಟಸಂಭವಗಳು

ಗುತ್ತಿಗೆದಾತನ ವಿನಿಯೋಜನೆಯ ಭದ್ರತೆಯು ವಿಶೇಷ ವಾಗಿ ಗುತ್ತಿಗೆಗೆ ಪಡೆದ ಆಸ್ತಿ/ಉಪಕರಣದ ಸಹಾಯದಿಂದ ಹೆಚ್ಚಿನ ನಗದು ಹರಿವನ್ನು ಸೃಷ್ಟಿಸುವ ಗುತ್ತಿಗೆದಾರನ ಸ್ಥಿರತೆ ಹಾಗೂ ಸಾಮರ್ಥ್ಯವನ್ನು ಅವಲಂಬಿಸಿರುತ್ತದೆ. ಕೆಲವೊಮ್ಮೆ ದ್ವಿತೀಯಕ ಮಾರುಕಟ್ಟೆಗಳು ದೊರಕದಿರು ವುದು, ಹಳತಾಗಿ ಹೋದ ಉಪಕರಣದ ಮರುಗುತ್ತಿಗೆಯ ಸಮಸ್ಯೆಗಳು, ಇವುಗಳಿಂದಾಗಿ ಆಸ್ತಿಯ ಉಳಿಕೆ ಮೌಲ್ಯ ವನ್ನು ನಿಖರವಾಗಿ ಲೆಕ್ಕ ಹಾಕಲು ಅಡ್ಡಿಯಾಗುತ್ತದೆ.

ಆದರೆ ಈ ನಷ್ಟಸಂಭವಗಳು ಅಪರಿಹಾರ್ಯವೇನಲ್ಲ. ಅನಿರೀಕ್ಷಿತ ಗಂಡಾಂತರ ಸನ್ನಿವೇಶಗಳನ್ನು ಬಿಟ್ಟರೆ ಉಳಿ ದಂತೆ ಗುತ್ತಿಗೆಯನ್ನು ಗುತ್ತಿಗೆದಾತನ ಪೂರ್ವಾನುಮತಿ ಇಲ್ಲದೆ ರದ್ದುಗೊಳಿಸಲಾಗದು ಎಂಬ ಷರತ್ತನ್ನು ಹಾಕು ವುದರ ಮೂಲಕ ಈ ಆತಂಕವನ್ನು ಸ್ವಲ್ಪಮಟ್ಟಿಗೆ ನಿವಾರಿಸಿಕೊಳ್ಳಬಹುದು. ಒಪ್ಪಂದವನ್ನು ಸ್ಥಿರಗೊಳಿಸುವ ಮತ್ತೊಂದು ವಿಧವೆಂದರೆ ಬಾಡಿಗೆಯ ಒಂದು ನಿರ್ದಿಷ್ಟ ಮೊತ್ತವನ್ನು ಗುತ್ತಿಗೆದಾತನಿಂದ ಮುಂಗಡವಾಗಿ ಪಡೆಯು ವುದು. ಇದರಿಂದ ಗುತ್ತಿಗೆದಾತನಿಗೆ ಗಣನೀಯ ಮೊತ್ತದ ಪ್ರತಿಫಲ ದೊರೆತು, ಸ್ಥಿತ್ಯಂತರದ ಅವಧಿಯ (ಟ್ರಾನ್ಸಿಷ-ನಲ್ ಪೀರಿಯಡ್) ಸಮಸ್ಯೆಗಳನ್ನು ಎದುರಿಸಲು ಸಹಾಯ ವಾಗುತ್ತದೆ.

### ಗುತ್ತಿಗೆದಾರನಿಗೆ ದೊರೆಯುವ ಪ್ರಯೋಜನಗಳು

1 ಉಪಕರಣ/ಆಸ್ತಿಯನ್ನು ಗುತ್ತಿಗೆಗೆ ಪಡೆಯುವುದ ರಿಂದ ಯಂತ್ರಸ್ಥಾವರವೇ ಮುಂತಾದ ದೀರ್ಘಾವಧಿ ವಿನಿಯೋಜನೆಗೆ ಮೀಸಲಾದ ಸಂಪನ್ಮೂಲಗಳನ್ನು ಚಾಲ್ತಿ ಬಂಡವಾಳದ ಅಗತ್ಯಗಳಿಗಾಗಿ ಬಳಸಿಕೊಳ್ಳಬಹುದು. ಇದ ರಿಂದ ಉದ್ಯಮದ ನಗದು ಹರಿವಿನ ಪ್ರಮಾಣ ಹೆಚ್ಚುತ್ತದೆ.

2 ಗುತ್ತಿಗೆದಾರ ಗುತ್ತಿಗೆದಾತನಿಗೆ ನೀಡುವ ಕಂತು ಹಾಗೂ ಬಡ್ಡಿಯ ಮೊತ್ತವನ್ನು ಅವನ ಉದ್ಯಮದ ಲಾಭದ ಲೆಕ್ಕಕ್ಕೆ ಖರ್ಚು ಹಾಕಬಹುದು.

3 ಗುತ್ತಿಗೆದಾರ ನೀಡುವ ಬಡ್ಡಿದರ ಯಾವುದೇ ಅವಧಿ ಸಾಲನೀಡಿಕೆ ಸಂಸ್ಥೆ ವಿಧಿಸುವ ದರಕ್ಕಿಂತ ಕಡಿಮೆಯಿರುತ್ತದೆ. ಗುತ್ತಿಗೆದಾತ ತೆರಿಗೆ ಪದ್ಧತಿಯಿಂದ ಪಡೆಯುವ ವಿನಿ ಯೋಜನೆ ಹಾಗೂ ಇಳುವರಿ ವಿನಾಯಿತಿಯ ಕೆಲವಂಶವನ್ನು ಗುತ್ತಿಗೆದಾರನಿಗೆ ನೀಡುವುದರಿಂದ ಇದು ಸಾಧ್ಯವಾಗಿದೆ.

4 ಆಸ್ತಿ/ಉಪಕರಣವನ್ನು ಗುತ್ತಿಗೆಗೆ ಪಡೆಯುವುದು ಅದನ್ನು ಕೊಳ್ಳುವುದಕ್ಕಿಂತ ಸುಲಭವಾದುದು ಮತ್ತು ಕ್ಷಿಪ್ರ ವಾಗಿ ಆಗುವಂಥದು. ಗುತ್ತಿಗೆದಾರ ನಾಳಿನ ಆಸ್ತಿ/ಉಪ ಕರಣವನ್ನು ಇಂದಿನ ದರದಲ್ಲಿ ಇಂದಿನ ಉಪಯೋಗಕ್ಕೆ ಪಡೆಯುತ್ತಾನೆ. ಅವಧಿ ಸಾಲನೀಡಿಕೆ ಸಂಸ್ಥೆಯಿಂದ ಧನ ಸಹಾಯ ಪಡೆಯಬೇಕಾದಾಗ ಅನುಭವವಾಗುವ ಹಲವಾರು ತೊಡಕುಗಳನ್ನೂ ಗುತ್ತಿಗೆಯ ವಿಧಾನದಿಂದ ಪರಿಹರಿಸಿ ಕೊಳ್ಳಬಹುದಾಗಿದೆ.

5 ಆಸ್ತಿ/ಉಪಕರಣವನ್ನು ಗುತ್ತಿಗೆಗೆ ಪಡೆಯುವುದು ಸಾಲ ಪಡೆಯುವ ಪ್ರಕ್ರಿಯೆ ಅಲ್ಲವಾದುದರಿಂದ ಆಸ್ತಿ/ಉಪಕರಣ ಮೌಲ್ಯ ಎಷ್ಟೇ ಇರಲಿ, ಉದರಿ ಪ್ರಾಧಿಕೃತಿ ಯೋಜನೆಯ (ಕ್ರೆಡಿಟ್ ಆಥರೈಸೇಷನ್ ಸ್ಕೀಮ್) ಅನ್ವಯ ರಿಸರ್ವ್ ಬ್ಯಾಂಕಿನ ಪೂರ್ವಾನುಮತಿ ಪಡೆಯುವ ಅಗತ್ಯ ವಿಲ್ಲ.

6 ಇದೇ ಕಾರಣದಿಂದಾಗಿ, ಆಸ್ತಿ/ಉಪಕರಣದ ಮೌಲ್ಯ ಸ್ವಂತ ಆಸ್ತಿಯ ಲೆಕ್ಕಕ್ಕೆ ಬಾರದಿರುವುದರಿಂದ ಏಕಸ್ವಾಮ್ಯ ಹಾಗೂ ಪ್ರತಿಬಂಧಕ ವ್ಯಾಪಾರ ಪದ್ಧತಿ (ಮನಾಪಲೀಸ್ ಅಂಡ್ ರಿಸ್ಟ್ರಿಕ್ಟಿವ್ ಟ್ರೇಡ್ ಪ್ರಾಕ್ಟಿಸಸ್) ಅಧಿನಿಯಮದಲ್ಲಿ ವಿಧಿಸಲಾಗಿರುವ ಇಪ್ಪತ್ತುಕೋಟಿ ರೂಪಾಯಿಗಳ ಆಸ್ತಿಯ ಮಿತಿಯೊಳಗೇ ಇರುವ ಅನುಕೂಲವೂ ಗುತ್ತಿಗೆದಾರನಿಗೆ ಲಭಿಸುತ್ತದೆ.

7 ಗುತ್ತಿಗೆದಾತ ಆಸ್ತಿಯ ಪೂರ್ಣ ಮೌಲ್ಯವನ್ನು ಭರಿಸುವುದರಿಂದ ಗುತ್ತಿಗೆದಾತ ತನ್ನ ಭಾಗದ ಸ್ವಂತ ಹಣ ಹೊಂದಿಸುವ ಅಗತ್ಯವಿಲ್ಲ.

8 ಋಣ-ಸ್ವಂತ ಬಂಡವಾಳ ಅನುಪಾತ (ಡೆಟ್-ಎಕ್ವಿಟಿ ರೇಷಿಯೊ) ಗುತ್ತಿಗೆದಾರನಿಗೆ ಅನುಕೂಲಕರವಾಗಿರುತ್ತದೆ. ಏಕೆಂದರೆ ಯಂತ್ರೋಪಕರಣಗಳಿಗಾಗಿ ಬಂಡವಾಳದ ಹೊರೆ ಇರುವುದಿಲ್ಲ. ಬ್ಯಾಂಕುಗಳಿಂದ ಸಾಲ ನೆರವು ಪಡೆಯುವಾಗ ಈ ಅಂಶ ಗಣನೀಯವಾಗಿ ಸಹಾಯ ಮಾಡುತ್ತದೆ.

9 ಗುತ್ತಿಗೆ ಕಾರ್ಯಾಚರಣೆಯಿಂದ ಯಂತ್ರಸ್ಥಾವರವನ್ನು ಆಧುನೀಕರಣಗೊಳಿಸುವುದೂ ಗುತ್ತಿಗೆದಾತನಿಗೆ ಸಾಧ್ಯವಾಗಿದೆ.

### ಗುತ್ತಿಗೆದಾರ ಎದುರಿಸಬೇಕಾಗಿ ಬರುವ ನಷ್ಟ ಸಂಭವಗಳು

1 ತಂತ್ರಜ್ಞಾನ ಕ್ಷೇತ್ರದಲ್ಲಿನ ಸಂಶೋಧನೆ ಹಾಗೂ ಅಭಿವೃದ್ಧಿಯ ನಾಗಾಲೋಟದಿಂದ ಗುತ್ತಿಗೆಯ ಅವಧಿ ಅಲ್ಪ ಕಾಲಿಕ ಅಥವಾ ಮಧ್ಯಕಾಲಿಕವಾಗುವಂತೆ ಕುಂಠಿತಗೊಳ್ಳುತ್ತದೆ. ಈ ಕಾರಣದಿಂದಾಗಿ ಗುತ್ತಿಗೆದಾರ ನೀಡಬೇಕಾಗಿರುವ ಬಾಡಿಗೆಯ ಹೊರೆ ಗಣನೀಯವಾಗಿ ಹೆಚ್ಚುತ್ತದೆ. ಈ ಆತಂಕವನ್ನು ನಿವಾರಿಸಿಕೊಳ್ಳಬೇಕಾದರೆ ಗುತ್ತಿಗೆದಾರನಿಗೆ ತಂತ್ರಜ್ಞಾನದ ಸಂಶೋಧನೆ-ಅಭಿವೃದ್ಧಿ ಕುರಿತ ಸ್ಪಷ್ಟ ಪರಿಕಲ್ಪನೆ ಇರಬೇಕು.

2 ಪ್ರಾಥಮಿಕ ಗುತ್ತಿಗೆಯ ಅವಧಿ ತೀರಿದ ಅನಂತರ ಆಸ್ತಿ/ಉಪಕರಣವನ್ನು ವಾಪಸು ಪಡೆಯಲು ಅಥವಾ ಬಿಕರಿ ಮಾಡಲು ಗುತ್ತಿಗೆಗೆ ಮೊದಲೇ ಒಂದು ಸ್ಥಿರವಾದ ಒಪ್ಪಂದಕ್ಕೆ ಬರುವುದು ಗುತ್ತಿಗೆದಾರನ ದೃಷ್ಟಿಯಿಂದ ಒಂದು ದುಬಾರಿಯಾದ ವಿಷಯ. ಈ ಅವಧಿಯು ಆಸ್ತಿಯ ಅನುಕೂಲತಮ ಆರ್ಥಿಕ ಅವಧಿಯೊಂದಿಗೆ (ಆಪ್ಟಿಮಮ್ ಎಕನಾಮಿಕ್ ಪೀರಿಯಡ್) ಸಮ್ಮಿಳಿತವಾಗಿರುವುದಿಲ್ಲವಾದುದರಿಂದ ಆಸ್ತಿ/ಉಪಕರಣದ ಗುತ್ತಿಗೆ ಮುಂದುವರಿಸುವುದು ಲಾಭಕರವೇ ಅಥವಾ ವಾಪಸು ಮಾಡುವುದು ಲಾಭಕರವೇ ಎಂಬ ಸಂದಿಗ್ಧತೆ ಗುತ್ತಿಗೆದಾರನನ್ನು ಕಾಡುತ್ತದೆ. ಮೂಲ ಗುತ್ತಿಗೆ ಒಪ್ಪಂದದಲ್ಲೇ ಸಮಂಜಸವಾದ "ಫಲಾನುಭವಿ ಪ್ರಸ್ತಾಪ"ವನ್ನು (ಬೆನಿಫಿಷಿಯರಿ ಕ್ಲಾಸ್) ಸೂಚಿಸುವ ಮೂಲಕ ಈ ತೊಂದರೆಯನ್ನು ಪರಿಹರಿಸಿಕೊಳ್ಳಬಹುದು.

### ಗುತ್ತಿಗೆ ಕಾರ್ಯಾಚರಣೆಯ ಇತಿಹಾಸ

ಗುತ್ತಿಗೆಯ ಕಾರ್ಯಾಚರಣೆಯ ಇತಿಹಾಸವನ್ನು ಬಹಳ ಹಿಂದೆಯೇ ಗುರುತಿಸಲಾಗಿದೆ. ಕ್ರಿಸ್ತಪೂರ್ವಕ್ಕೆ 1000ದಷ್ಟು ಹಿಂದೆಯೇ ಫಿನೀಷಿಯನ್ನರು ಹಡಗುಗಳನ್ನು ಬಾಡಿಗೆಗೆ ನೀಡುತ್ತಿದ್ದರು ಎಂಬ ಐತಿಹ್ಯವಿದೆ. 19ನೆಯ ಶತಮಾನದ ಉತ್ತರ ಭಾಗದಲ್ಲಿ ಅಮೆರಿಕ ಸಂಸ್ಥಾನದ ರೈಲುರಸ್ತೆ ಕಂಪನಿಗಳು ರೈಲುಬಂಡಿಗಳನ್ನು ಗುತ್ತಿಗೆಗೆ ನೀಡುತ್ತಿದ್ದುವು ಎಂದೂ ತಿಳಿದುಬಂದಿದೆ.

ಇಂದು ಅಮೆರಿಕದಲ್ಲಿ ಗುತ್ತಿಗೆ ಹಣಕಾಸು ವಿಧಾನ ಸಾಂಸ್ಥಿಕ ಹಣಕಾಸಿನ ಅನಂತರ ಎರಡನೆಯ ಸ್ಥಾನದಲ್ಲಿದೆ. ಇಂದು ಅಲ್ಲಿ ಗುತ್ತಿಗೆಗೆ ನೀಡಲಾಗಿರುವ ಯಂತ್ರಸ್ಥಾವರ ಹಾಗೂ ಯಂತ್ರೋಪಕರಣಗಳು ಒಟ್ಟು ಬಂಡವಾಳದ ಶೇ. 18.7ರಷ್ಟು ಇದೆಯೆಂಬುದು ಒಂದು ಅಂದಾಜು. ಸುಮಾರು 20,000 ಕೋಟಿ ಡಾಲರ್ ಮೌಲ್ಯದ ಬಂಡವಾಳ ಯಂತ್ರಗಳನ್ನು ಗುತ್ತಿಗೆಯ ಕಾರ್ಯಾಚರಣೆ ಮೂಲಕ ಅಲ್ಲಿನ ಕೈಗಾರಿಕೆ ಹಾಗೂ ಉದ್ಯಮದಲ್ಲಿ ತೊಡಗಿಸಲಾಗಿದೆ. ಮತ್ತು ಒಂದು ಸಾವಿರ ಗುತ್ತಿಗೆ ಕಂಪನಿಗಳು ಅಲ್ಲಿ ಇಂದು ಕಾರ್ಯ ನಿರ್ವಹಿಸುತ್ತಿವೆ.

ತ್ವರಿತವಾದ ಕೈಗಾರಿಕಾಭಿವೃದ್ಧಿಯನ್ನು ಕಂಡ ಜಪಾನ್ ದೇಶದಲ್ಲಿ ಸುಮಾರು 4,700 ಕೋಟಿ ಡಾಲರ್ ಮೌಲ್ಯದ ಆಸ್ತಿಯನ್ನು ಅಲ್ಲಿಯ ಗುತ್ತಿಗೆ ಕಂಪನಿಗಳು ಹೊಂದಿವೆ.

ಭಾರತದಲ್ಲಿ ಮೊತ್ತಮೊದಲ ಗುತ್ತಿಗೆ ಕಂಪನಿ 1973ರಲ್ಲಿ ಆರಂಭವಾಯಿತು. ಇಂದು ಸುಮಾರು 150 ಕಂಪನಿಗಳು ಕಾರ್ಯ ನಿರ್ವಹಿಸುತ್ತಿವೆ. ಅವುಗಳಲ್ಲಿ ಪ್ರಮುಖವಾದುದೆಂದರೆ ಲಾರ್ವಿನ್ ಲೀಸಿಂಗ್, 20 ಸೆಂಚುರಿ ಲೀಸಿಂಗ್, ಬೆಂಗಳೂರು ಲೀಸಿಂಗ್, ಯುನೈಟೆಡ್ ಲೀಸಿಂಗ್ ಮತ್ತು ಮಾಗ್ನಾ ಲೀಸಿಂಗ್.

ಆರನೆಯ ಯೋಜನೆಯ ಉಳಿದ ಅವಧಿಯಲ್ಲಿ ಒಟ್ಟು ವಿನಿಯೋಜನೆಯ ಮೊತ್ತ ರೂ. 16,985 ಕೋಟಿಯಷ್ಟು ಇರುವುದೆಂದು ಅಂದಾಜು ಮಾಡಲಾಗಿದೆ. ಆಂತರಿಕ ಸಂಪನ್ಮೂಲ ಸಂಗ್ರಹಣೆ, ಸಾಂಸ್ಥಿಕ ಹಣಕಾಸು ಇವೆಲ್ಲವನ್ನು ಲೆಕ್ಕಕ್ಕೆ ತೆಗೆದುಕೊಂಡರೂ ರೂ. 1,011 ಕೋಟಿಯಷ್ಟು ಬಂಡವಾಳದ ಕೊರತೆಯಿದೆ ಎಂದು ಅಂದಾಜು ಮಾಡಲಾಗಿದೆ. ಈ ಕೊರತೆಯ ಶೇ. 15ರಷ್ಟನ್ನು ಗುತ್ತಿಗೆ ಕಾರ್ಯಾಚರಣೆ ತುಂಬಬಲ್ಲುದು ಎಂದು ಲೆಕ್ಕಹಾಕಿದರೂ ವಾರ್ಷಿಕ ಗುತ್ತಿಗೆ ವಹಿವಾಟಿನ ಮೊತ್ತ ಸುಮಾರು ರೂ. 50 ಕೋಟಿಯಷ್ಟು ಇರುತ್ತದೆ. ಆಸ್ತಿ/ಉಪಕರಣವನ್ನು ಗುತ್ತಿಗೆಗೆ ಹೊಂದುವುದು ಅದನ್ನು ಕೊಳ್ಳುವುದಕ್ಕಿಂತ ಲಾಭದಾಯಕ ಎಂದು ಉದ್ಯಮಿಗಳಿಗೆ ಈಗೀಗ ಅರಿವಾಗುತ್ತಿರುವುದು ಗುತ್ತಿಗೆ ಚಟುವಟಿಕೆ ತೀವ್ರವಾಗಿ ಹೆಚ್ಚು ಸಹಕಾರಿಯಾಗಿದೆ.

### ಗುತ್ತಿಗೆ ಹಣಕಾಸಿನಲ್ಲಿ ಬ್ಯಾಂಕುಗಳ ಪಾತ್ರ

ಗುತ್ತಿಗೆ ಕಾರ್ಯಾಚರಣೆಯಲ್ಲಿ ಇದುವರೆಗೆ ಬ್ಯಾಂಕುಗಳು ವಹಿಸಿರುವ ಪಾತ್ರ ತೀರಾ ಸ್ವಲ್ಪವೆನ್ನಬಹುದು. ಬ್ಯಾಂಕುಗಳು ಹೊಂದಿರುವ ವಿಸ್ತೃತ ಶಾಖಾಜಾಲದ ಭೌಗೋಳಿಕ ಅನುಕೂಲ, ಸಾಲನೀಡಿಕೆಯ ಪ್ರಕ್ರಿಯೆಗಳಾದ ದಸ್ತಾವೇಜೀಕರಣ (ಡಾಕ್ಯುಮೆಂಟೇಷನ್), ಉದರಿ ಮೇಲುಸ್ತುವಾರಿ ಮತ್ತಿತರ ಕ್ಷೇತ್ರಗಳಲ್ಲೂ ಬ್ಯಾಂಕುಗಳಿಗೆ ಪ್ರಾಪ್ತವಾಗಿರುವ ವ್ಯಾಪಕ ಅನುಭವ—ಇವು ಬ್ಯಾಂಕುಗಳು ಗುತ್ತಿಗೆ ಕಾರ್ಯಾಚರಣೆಯಲ್ಲಿ ಸಕ್ರಿಯವಾಗಿ ಭಾಗವಹಿಸಲು ಪ್ರೇರಕವಾದ ಅಂಶಗಳಾಗಿವೆ. ಇಂಗ್ಲೆಂಡಿನಲ್ಲಿ ಪ್ರತಿಯೊಂದು ವಾಣಿಜ್ಯ ಬ್ಯಾಂಕೂ ಗುತ್ತಿಗೆ ಕಂಪನಿಗಳನ್ನು ಸಹಾಯಕ ಕಂಪನಿಗಳನ್ನಾಗಿ ಹೊಂದಿದೆ. ಬ್ಯಾಂಕಿಂಗ್ ನಿಯಂತ್ರಣದ ಅಧಿನಿಯಮದ 19ನೆಯ ಅನುಚ್ಛೇದವನ್ನು ತಿದ್ದುಪಡಿ

ಮಾಡುವ ಮೂಲಕ ಸಂಸತ್ತು ಇತ್ತೀಚೆಗೆ ಬ್ಯಾಂಕಿಂಗ್ ಕಂಪನಿಗಳು ಸಹಾಯಕ ಕಂಪನಿಗಳನ್ನು ಹೊಂದಲು ಅನುವು ಮಾಡಿಕೊಟ್ಟಿದೆ. ಭಾರತೀಯ ಸ್ಟೇಟ್ ಬ್ಯಾಂಕ್ ಭಾರತದ ಕೈಗಾರಿಕಾ ಸಾಲ ಮತ್ತು ವಿನಿಯೋಜನಾ ನಿಗಮದ (ಇಂಡಸ್ಟ್ರಿಯಲ್ ಕ್ರೆಡಿಟ್ ಅಂಡ್ ಇನ್ವೆಸ್ಟ್‌ಮೆಂಟ್ ಕಾರ್ಪೊರೇಷನ್ ಆಫ್ ಇಂಡಿಯ) ಜತೆ ಸೇರಿ ಗುತ್ತಿಗೆ ಕಂಪನಿಯೊಂದನ್ನು ಆರಂಭಿಸಿದೆ. ಇತರ ಬ್ಯಾಂಕುಗಳೂ ಈ ಹಾದಿಯನ್ನು ಅನುಸರಿಸುವ ಲಕ್ಷಣಗಳಿವೆ. ಹೀಗೆ ಮುಂಬರುವ ವರ್ಷಗಳಲ್ಲಿ ವಾಣಿಜ್ಯ ಬ್ಯಾಂಕುಗಳು ಗುತ್ತಿಗೆ ಕಾರ್ಯಾಚರಣೆಯಲ್ಲಿ ಸಕ್ರಿಯವಾಗಿ ಭಾಗವಹಿಸುವ ಪ್ರವೃತ್ತಿ ಕಂಡುಬರುತ್ತಿದೆ.

### ಈಚಿನ ಬೆಳವಣಿಗೆಗಳು

1 ಈಚೆಗೆ ಗುತ್ತಿಗೆ ಕಾರ್ಯಾಚರಣೆ ಬಗ್ಗೆ ನಡೆದ ರಾಷ್ಟ್ರಮಟ್ಟದ ವಿಚಾರಸಂಕಿರಣದಲ್ಲಿ ಭಾಗವಹಿಸಿದ ಕೇಂದ್ರ ಹಣಕಾಸು ರಾಜ್ಯಮಂತ್ರಿಗಳು ಗುತ್ತಿಗೆ ಸಂಸ್ಥೆಗಳ 'ನಾಯಿ ಕೊಡೆ' ಬೆಳವಣಿಗೆಯನ್ನು ಆತಂಕದಿಂದ ಗುರುತಿಸಿದ್ದಾರೆ. ಅಲ್ಲದೆ ಇದರಲ್ಲಿ ಭಾಗವಹಿಸಿದ್ದ ಇತರ ತಜ್ಞರು ಗುತ್ತಿಗೆ ಕಾರ್ಯಾಚರಣೆಯಲ್ಲಿ ನಿಖರವಾದ ತತ್ವಗಳು, ಕಟ್ಟುಪಾಡುಗಳು ಇಲ್ಲದಿರುವುದು ಮುಂತಾದುವನ್ನು ಚರ್ಚಿಸಿದ್ದಾರೆ. ಗುತ್ತಿಗೆ ಕಾರ್ಯಾಚರಣೆ ಹೆಚ್ಚಿದಂತೆಲ್ಲಾ ಸರ್ಕಾರೀ ಪ್ರಾಧಿಕರಣದ ನಿಯಂತ್ರಣವೂ ಹೆಚ್ಚುವ ಇಂಗಿತವನ್ನು ಈ ಪ್ರವೃತ್ತಿ ನೀಡುತ್ತದೆ. ಮುಕ್ತ ಅರ್ಥವ್ಯವಸ್ಥೆಯಲ್ಲಿ ಕಂಡ ಯಶಸ್ಸನ್ನು ಗುತ್ತಿಗೆ ಕಾರ್ಯಾಚರಣೆ ನಮ್ಮ ದೇಶದಲ್ಲಿರುವಂತಹ ಅರ್ಥವ್ಯವಸ್ಥೆಯಲ್ಲೂ ಕಾಣುವುದೇ ಎಂಬುದೂ ಅನುಮಾನಾಸ್ಪದವಾಗಿದೆ.

2 ಭಾರತದ ಗುತ್ತಿಗೆ ಕಂಪನಿಗಳು ಬಹುರಾಷ್ಟ್ರೀಯ ಕಂಪನಿಗಳ ಸ್ಪರ್ಧೆ ಎದುರಿಸುವ ಸಾಧ್ಯತೆಯಿದೆ. ಎಲ್ಲ ಸಂಪನ್ಮೂಲಗಳಿಂದ ಸನ್ನದ್ಧವಾಗಿರುವ ಬಹುರಾಷ್ಟ್ರೀಯ ಕಂಪನಿಗಳ ದೈತ್ಯಸ್ಪರ್ಧೆಯನ್ನು ಎದುರಿಸಬೇಕಾಗಿದೆ.

3 ಭಾರತದಲ್ಲಿಯ ಗುತ್ತಿಗೆ ಕಂಪನಿಗಳು ಕೆಲವೇ ವರ್ಗದ ಗ್ರಾಹಕರನ್ನು ಓಲೈಸುತ್ತವೆ ಎಂಬ ಅಪವಾದವೂ ಇದೆ. ಇದರಿಂದ ಕೈಗಾರಿಕೆಗಳ ಸರ್ವತೋಮುಖ ಅಭಿವೃದ್ಧಿ ಗುತ್ತಿಗೆ ಕಾರ್ಯಾಚರಣೆಯಿಂದ ಎಷ್ಟರ ಮಟ್ಟಿಗೆ ಸಾಧ್ಯ ಎಂಬ ಅನುಮಾನಕ್ಕೂ ಇದು ದಾರಿಮಾಡಿಕೊಟ್ಟಿದೆ.

4 ಗುತ್ತಿಗೆ ಕಾರ್ಯಾಚರಣೆ ಹೊಸದಾದ ಪ್ರವೃತ್ತಿಯಾದುದರಿಂದ ಗುತ್ತಿಗೆ ಕಂಪನಿಗಳನ್ನು ಪರಿಣತ ಸಿಬ್ಬಂದಿಯ ಅಭಾವ ಬಾಧಿಸುತ್ತಿದೆ. ತಮ್ಮ ಆರ್ಥಿಕ ಜೀವಂತಿಕೆಯನ್ನು (ಎಕನಾಮಿಕ್ ವೈಯಬಿಲಿಟಿ) ಉಳಿಸಿಕೊಳ್ಳಬೇಕಾದರೆ ಈ ತಡೆಯನ್ನು ಗುತ್ತಿಗೆ ಕಂಪನಿಗಳು ನಿವಾರಿಸಿಕೊಳ್ಳಲೇಬೇಕು.

5 ನಿರ್ದೇಶಕ ಮಂಡಳಿಯಲ್ಲಿ ಗುತ್ತಿಗೆ ಕಂಪನಿಗಳು ಕೆಲವೇ ಪಟ್ಟಭದ್ರರನ್ನು ಸಂತುಷ್ಟಗೊಳಿಸಲು ಅಲಂಕಾರದ ಸ್ಥಾನಗಳನ್ನು ಔಚಿತ್ಯರಹಿತವಾಗಿ ಸೃಷ್ಟಿಸುತ್ತಿದೆ ಎನ್ನಲಾಗಿದೆ. ಗ್ರಾಹಕರ ಹಾಗೂ ವಿನಿಯೋಜಕರ ಹಿತದೃಷ್ಟಿಯಿಂದ ಈ ಪ್ರವೃತ್ತಿ ಬದಲಾಗುವುದು ಆರೋಗ್ಯಕರ ಎನ್ನುವುದೂ ಕೇಳಿಬರುತ್ತದೆ.

ಈ ವಾದಗಳೇನೇ ಇರಲಿ, ಕೈಗಾರಿಕಾವಲಯದ ಮೂಲಭೂತ ಹಾಗೂ ಜಟಿಲ ಸಮಸ್ಯೆಯನ್ನು ನಿವಾರಿಸಬಲ್ಲ ಗುತ್ತಿಗೆ ಕಾರ್ಯಾಚರಣೆ ಇನ್ನೂ ಶೈಶವಾವಸ್ಥೆಯಲ್ಲಿದೆ ಎಂಬುದಂತೂ ನಿಜ. ನಮ್ಮ ಅರ್ಥವ್ಯವಸ್ಥೆ ಈ ಶಿಶುವನ್ನು ಪ್ರವರ್ಧಮಾನಕ್ಕೆ ತರುವುದೇ ಎಂಬುದು ಕಾದು ನೋಡಬೇಕಾದ ವಿಷಯ.

# ಗ್ರಾಮೀಣ ಶಾಖೆಗಳ ಸಿಬ್ಬಂದಿ ಸಮಸ್ಯೆಗಳು

**ಅತ್ತೂರು ಚೈಯಬ್ಬ**

ಬ್ಯಾಂಕುಗಳು ತಮ್ಮ ಕಾರ್ಯವ್ಯಾಪ್ತಿಯನ್ನು ರಾಷ್ಟ್ರೀಕರಣದ ನಂತರ ದೇಶದ ಮೂಲೆಮೂಲೆಗಳಿಗೂ ವಿಸ್ತರಿಸಿದ್ದು, ಇದರ ಪರಿಣಾಮವಾಗಿ ಗ್ರಾಮಗ್ರಾಮಗಳಲ್ಲೂ ಬ್ಯಾಂಕು ಶಾಖೆಗಳು ತೆರೆಯಲ್ಪಡುತ್ತಿವೆ. ಹಿಂದೆ ಬ್ಯಾಂಕುಗಳು ಖಾಸಗಿ ಜನರ ಅಧೀನದಲ್ಲಿದ್ದು ಕೇವಲ ಪಟ್ಟಣ ಹಾಗೂ ಭವಸಾಮರ್ಥ್ಯವುಳ್ಳ ಜಾಗಗಳಲ್ಲಿ ಮಾತ್ರ ಶಾಖೆಗಳನ್ನು ಪ್ರಾರಂಭಿಸುತ್ತಿದ್ದವು. ಆದರೆ ಈಗ ಬ್ಯಾಂಕುಗಳ ದೃಷ್ಟಿ ಬದಲಾಗಿದೆ. ಗ್ರಾಮಾಂತರ ಜನರ ಮತ್ತು ಅವರು ಅವಲಂಬಿಸಿರುವ ಕುಲಕಸಬುಗಳು ಹಾಗೂ ವೃತ್ತಿಗಳಲ್ಲಿ ಹೆಚ್ಚಿನ ಆಸಕ್ತಿ ತಳೆದಿವೆ. ಶೇಕಡ 80ರಷ್ಟು ಕೃಷಿ ಅವಲಂಬಿ ಜನರು ಭಾರತ ದೇಶದಲ್ಲಿದ್ದಾರೆ. ದೇಶದ ಆರ್ಥಿಕ ಮತ್ತು ಸಾಮಾಜಿಕ ಏಳಿಗೆಯಾಗಬೇಕಾದರೆ ಅವರಿಗೆ ಸರಿಯಾದ ನೆರವು ಹಾಗೂ ಸಲಹೆಗಳ ಅಗತ್ಯವಿದೆ. ಇದು ಬ್ಯಾಂಕುಗಳಿಂದ ಮಾತ್ರ ಸಾಧ್ಯ. ಇದನ್ನು ಮನಗಂಡ ನಮ್ಮ ಸರಕಾರ 1969ರಲ್ಲಿ 14 ಹಾಗೂ 1981ರಲ್ಲಿ 6 ಬ್ಯಾಂಕುಗಳ ರಾಷ್ಟ್ರೀಕರಣ ಮಾಡಿ ಬ್ಯಾಂಕಿಂಗ್ ಕಾರ್ಯಕ್ಷೇತ್ರಕ್ಕೆ ಒಂದು ಹೊಸ ತಿರುವು ಕೊಟ್ಟಿತು. ಹಾಗೆಯೇ ವಿವಿಧ ಯೋಜನೆಗಳನ್ನು ದೇಶದ ಗ್ರಾಮಾಂತರ ಪ್ರದೇಶಗಳ ಹಾಗೂ ಜನರ ಏಳಿಗೆಯ ದೃಷ್ಟಿಯನ್ನಿಟ್ಟುಕೊಂಡು ರೂಪಿಸಿತು. ಇದರ ಪರಿಣಾಮಕಾರಿ ಆಚರಣೆಗಾಗಿ ತ್ವರಿತಗತಿಯಿಂದ ದೇಶದಾದ್ಯಂತ ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕು ಶಾಖೆಗಳು ತೆರೆಯಲ್ಪಟ್ಟವು. ಸ್ಟೇಟ್ ಬ್ಯಾಂಕು ಮತ್ತು ಇತರ ರಾಷ್ಟ್ರೀಕೃತ ಬ್ಯಾಂಕುಗಳು ತಮ್ಮ ತಮ್ಮ ಶಾಖೆಗಳನ್ನು ಹಳ್ಳಿಹಳ್ಳಿಗಳಲ್ಲೂ ಪ್ರಾರಂಭಿಸಲಾರಂಭಿಸಿದುವು. ಹಾಗೆಯೇ ಸರಕಾರದ ಎಲ್ಲಾ ಯೋಜನೆಗಳ ಅನುಷ್ಠಾನಕ್ಕೆ ಕಂಕಣಬದ್ಧವಾದುವು. ಇದು ಗ್ರಾಮಾಭಿವೃದ್ಧಿಯ ಆರೋಗ್ಯಕರ ಲಕ್ಷಣವಾದರೂ ಇಲ್ಲಿಗೆ ಕೆಲಸ ಮಾಡಲು ಬರುವ ಉದ್ಯೋಗಿಗಳ ಬಗ್ಗೆ ಕಾಳಜಿ ವಹಿಸದೆ ಹಾಗೂ ಅವರ ಜೀವನಕ್ಕೆ ಬೇಕಾದ ಅಗತ್ಯಗಳ ಬಗ್ಗೆ ಯೋಚಿಸದಿರುವುದು ದುರದೃಷ್ಟಕರ. ಶಾಖೆಗಳು ತೆರೆದವು ಎಂದರೆ ಅಲ್ಲೊಬ್ಬ ವ್ಯವಸ್ಥಾಪಕ, ನಗದಿಗಾರ, ಗುಮಾಸ್ತ, ಜವಾನ ಇರಲೇಬೇಕು. ಕೆಲಸ ನಡೆಯಲೇಬೇಕು, ಎಂದಾದಮೇಲೆ ಸಮಸ್ಯೆಗಳು ಇರುವುದು ಸಹಜ. ಅವರ ಸಮಸ್ಯೆಗಳ ಬಗ್ಗೆ ಸರಕಾರ ಅಥವಾ ಬ್ಯಾಂಕು ಆಡಳಿತವರ್ಗದವರು ಯೋಚಿಸಿ, ಯೋಜಿಸಿ ತಕ್ಕ ವ್ಯವಸ್ಥೆ ಮಾಡಬೇಕಾದದ್ದು ಮುಖ್ಯ. ಯಾಕೆಂದರೆ ಗ್ರಾಮೀಣ ಶಾಖೆಯ ಸಿಬ್ಬಂದಿ ಸಮಸ್ಯೆಗಳು ಇತ್ತೀಚೆಗಂತೂ ಜಟಿಲವಾಗುತ್ತಿವೆ. ಹೆಚ್ಚು ಹೆಚ್ಚು ಮಂದಿ ಗ್ರಾಮೀಣ ಶಾಖೆಗಳಿಗೆ ಹೋಗಬೇಕಾಗುತ್ತದೆ. ಅಲ್ಲಿ ಸಾಧಾರಣ ಜನಜೀವನದ ಮುಖ್ಯ ಅಗತ್ಯಗಳು ಇರುವುದಿಲ್ಲ. ಹಾಗೆಯೇ ಹಳ್ಳಿಯ ಜನರಿಗೆ ಬ್ಯಾಂಕು ವಹಿವಾಟುಗಳ ಬಗ್ಗೆ ತಿಳಿವಳಿಕೆ ಇರುವುದಿಲ್ಲ. ಆದುದರಿಂದ ನಿಗದಿತ ಗುರಿಯ ಸಾಧನೆಯಲ್ಲಿ ಶಾಖಾ ಸಿಬ್ಬಂದಿ ಎದುರಿಸಿ ಜಯಿಸಬೇಕಾದದ್ದು ಬಹಳಷ್ಟಿದೆ. ಅಂತೂ ಈ ಸಮಸ್ಯೆಗಳ ಬಗ್ಗೆ ಪರಿಮಾಣಾತ್ಮಕ ಹಾಗೂ ಗುಣಾವಲಂಬಿ ಅಧ್ಯಯನ ನಡೆಯಬೇಕು.

ಗ್ರಾಮೀಣ ಶಾಖಾಸಿಬ್ಬಂದಿಗಳು ಎರಡು ವಿಧದ ಸಮಸ್ಯೆಗಳನ್ನು ಎದುರಿಸಬೇಕಾಗುವುದು. ಮೊದಲನೆಯವು ಸಾಮಾನ್ಯ ಸಮಸ್ಯೆಗಳು. ಎರಡನೆಯವು ವೈಯಕ್ತಿಕ ಸಮಸ್ಯೆಗಳು.

### ಸಾಮಾನ್ಯ ಸಮಸ್ಯೆಗಳು

ಸಾಮಾನ್ಯ ಸಮಸ್ಯೆಗಳು ಬ್ಯಾಂಕಿನ ವ್ಯವಹಾರಕ್ಕೆ ಸಂಬಂಧಪಟ್ಟವುಗಳು. ಇದರಲ್ಲಿ ಹಳ್ಳಿಗರಿಗೆ ಬ್ಯಾಂಕಿಂಗಿನ ವಿವಿಧ ಯೋಜನೆಗಳು, ಅದರ ಕಾರ್ಯವಿಧಾನ, ವಹಿವಾಟಿನ ರೀತಿ-ನೀತಿ ನಿಯಮಗಳ ಅಜ್ಞಾನದಿಂದಾಗುವ ಸಮಸ್ಯೆಗಳು. ಈ ಸಮಸ್ಯೆಗಳು ಮುಖ್ಯವಾಗಿ ಅನಕ್ಷರತೆಯ ಕಾರಣದಿಂದ ಉದ್ಭವಿಸುವಂತಹವು.ಪ್ರತಿಯೊಂದು ಗ್ರಾಮೀಣ ಪ್ರದೇಶದ ಶಾಖೆಗಳಲ್ಲಿ ಈ ತೊಂದರೆ ಇರುವುದು ಸರ್ವೇಸಾಮಾನ್ಯ. ಬ್ಯಾಂಕುಗಳಲ್ಲಿ ವ್ಯವಹರಿಸಲು ಹಳ್ಳಿಗರಲ್ಲಿ ಮುಜುಗರ ಇರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಬ್ಯಾಂಕಿನ ಬಗೆಗಿರುವ ಅವರ ತಪ್ಪು ತಿಳಿವಳಿಕೆ. ಎಷ್ಟೋ ಹಳ್ಳಿಗರು ಬ್ಯಾಂಕಿನಲ್ಲಿ ಹಣ ಇಡಲು ಹೆದರುವುದುಂಟು. ಕಾರಣ ಅವರ ಪಾಲಿಗೆ ಬ್ಯಾಂಕು ಎಂದರೆ ಸರಕಾರದ ಪ್ರತಿನಿಧಿ ಇದ್ದಂತೆ. ಎಲ್ಲಿ ತಮ್ಮ ಹಣವನ್ನು ಆದಾಯ ತೆರಿಗೆ ಅಧಿಕಾರಿಗಳು ಕಬಳಿಸುತ್ತಾರೋ ಎಂಬ ಭಯ. ಈ ಭೀತಿ, ನನ್ನ ಅನುಭವಕ್ಕೆ ಬಂದಂತೆ, ಹತ್ತುಸಾವಿರ ರೂಪಾಯಿ ಠೇವಣಿ ಇಡುವವನೂ ವ್ಯಕ್ತಪಡಿಸುತ್ತಾನೆ. ಅವನಿಗೆ ಸರಿಯಾದ

ತಿಳಿವಳಿಕೆ ನೀಡುವುದು ಬ್ಯಾಂಕು ಸಿಬ್ಬಂದಿಯ ನೈತಿಕ ಕರ್ತವ್ಯ. ಈ ವಿಷಯದಲ್ಲಿ ತುಂಬಾ ಶ್ರಮವಹಿಸಬೇಕಾದ ಸಂದರ್ಭಗಳಿವೆ.

ಇನ್ನೊಂದು ವಿಚಾರವೆಂದರೆ ಗ್ರಾಮಾಂತರ ಶಾಖೆಗಳಲ್ಲಿ ಸಿಬ್ಬಂದಿಯವರೇ ಚೆಕ್ಕು, ಚಲನು ಬರೆಯುವ ಹಾಗೂ ಹಣವನ್ನು ಅವನಿಗೆ ತಿಳಿಯುವ ರೀತಿಯಲ್ಲಿ ಎಣಿಸಿಕೊಡುವ ಕೆಲಸ ಮಾಡಬೇಕಾಗುತ್ತದೆ. ಎಷ್ಟೋ ಸಾರಿ ಇದರಿಂದ ಗೊಂದಲ ಪರಿಸ್ಥಿತಿ ಉಂಟಾಗುವುದೂ ಇದೆ. ತಾನು ಹೆಚ್ಚು ಹಣ ಕಟ್ಟಿದ್ದೇನೆ, ಅಷ್ಟು ಹಣ ನಾನು ತೆಗೆದುಕೊಂಡಿಲ್ಲ ಎಂಬ ವಾದವಿವಾದಗಳು ಬರುವುದುಂಟು. ಕಾರಣ, ಅವನು ಹೆಬ್ಬೆರಳ ಗುರುತೊತ್ತಿ ಚೆಕ್ಕಿನ ಮೌಲ್ಯವನ್ನು ಪಡೆಯುತ್ತಾನೆ. ಹಾಗಾಗಿ ಸಿಬ್ಬಂದಿಯ ಇತರ ಕೆಲಸಗಳು ಕುಂಠಿತವಾಗುತ್ತವೆ ಹಾಗೂ ಇತರ ಹಳ್ಳಿಯ ಗ್ರಾಹಕರ ಮೇಲೆ ಇದು ಪರಿಣಾಮ ಬೀರಿ, ಬ್ಯಾಂಕಿನ ಮುಂದಿನ ವ್ಯವಹಾರದಲ್ಲಿ ಅಡ್ಡಿಯುಂಟಾಗುತ್ತದೆ.

ಬಳಕೆಯಿಂದ ಗ್ರಾಮ ಪ್ರದೇಶಗಳ ಬ್ಯಾಂಕ್, ಶಾಖೆಗಳಲ್ಲಿ ಆಂಗ್ಲಭಾಷೆಯಿಂದ ಉಂಟಾಗಿರುವ ಸಮಸ್ಯೆಗಳು ಅನೇಕ. ಇದರಿಂದಾಗಿ ಸಾಮಾನ್ಯ ಜನತೆಗೆ ಬ್ಯಾಂಕಿನ ತಲೆ ಬುಡದ ಬಗ್ಗೆ ಸರಿಯಾದ ತಿಳಿವಳಿಕೆ ಬರುವುದಿಲ್ಲ. ಅವನು ಪ್ರತಿಸಾರಿ ಬ್ಯಾಂಕಿಗೆ ಬರುವಾಗಲೂ ಒಬ್ಬ ವಿದ್ಯಾವಂತನನ್ನು ಕರೆದುಕೊಂಡು ಬರಬೇಕಾಗುತ್ತದೆ. ಬಂದವನು ಅಲ್ಪಸ್ವಲ್ಪ ವಿದ್ಯೆ ಕಲಿತವನಾದರೆ ಬ್ಯಾಂಕುಗಳಲ್ಲಿ ವ್ಯವಹರಿಸಲು ಕಷ್ಟಕರವಾಗಬಹುದು. ಕಾರಣ ಹೆಚ್ಚಿನ ಬ್ಯಾಂಕುಗಳು ಇನ್ನೂ ಆಂಗ್ಲ ಹಿಡುಗಿನಿಂದ ಮುಕ್ತವಾಗಿಲ್ಲ. ಎಲ್ಲಾ ನಮೂನೆಗಳು ಆಂಗ್ಲ ಭಾಷೆಯಲ್ಲಿಯೇ ಇವೆ. ಭಾಷಾಂತರ ನಡೆದರೂ ಅದು ಆಂಗ್ಲ ಭಾಷೆಗಿಂತಲೂ ಕ್ಲಿಷ್ಟವಾಗಿದ್ದು ಹೊಲಸಾಗಿರುವುದು ಕಂಡುಬರುತ್ತವೆ. ಇದಕ್ಕೆ ತಜ್ಞರ ಸಹಾಯ ಪಡೆದು ಪ್ರಾದೇಶಿಕ ಭಾಷೆಯ ಬಳಕೆಯಾಗಬೇಕು. ಆದರೆ, ದುರದೃಷ್ಟಕರ ವಿಚಾರವೆಂದರೆ ಪ್ರಾದೇಶಿಕ ಭಾಷೆಗಳನ್ನು ಆಯಾ ರಾಜ್ಯಗಳಲ್ಲಿ ಅನುಷ್ಠಾನಕ್ಕೆ ತರಲು ಆಡಳಿತ ವರ್ಗ ಹಿಂದೇಟು ಹಾಕುತ್ತಿವೆ. ಇದರಿಂದಾಗಿ ಸಿಬ್ಬಂದಿವರ್ಗದವರು ತಮ್ಮ ಕೆಲಸಕಾರ್ಯಗಳನ್ನು ಪರಿಣಾಮಕಾರಿಯಾಗಿ ನಿಭಾಯಿಸುವಲ್ಲಿ ತೊಂದರೆ ಎದುರಿಸಬೇಕಾಗಿದೆ.

ಈ ಮೇಲಿನ ಸಮಸ್ಯೆಗಳ ಬಗ್ಗೆ ಯೋಚಿಸಿದಾಗ ಇವುಗಳ ಪರಿಹಾರ ಕೆಲಸ ತುಂಬಾ ಕಷ್ಟಕರವೆನಿಸುತ್ತವೆ. ಈ ಸಮಸ್ಯೆಗಳ ಪರಿಹಾರಕ್ಕಿಂತ ಮುಂಚೆ ಸಿಬ್ಬಂದಿ ವರ್ಗದವರಲ್ಲಿ ಹೃದಯಸ್ಥ ಮನೋಭಾವನೆಗಳ ಸ್ಪಂದನದ ಅಗತ್ಯವಿದೆ. ಈ ಸಮಸ್ಯೆ ದಿನಬೆಳಗಾಗುವುದರಲ್ಲಿ ಬಗೆಹರಿಸಲಾಗುವಂತಹುದಲ್ಲ. ಅನಕ್ಷರತೆಯ ಸಂಪೂರ್ಣ ನಿರ್ಮೂಲನೆ ನಮ್ಮ ನಿಮ್ಮ ಕೈಯಲ್ಲಿಲ್ಲ. ಇದಕ್ಕೆ ಸಮಗ್ರ ಕ್ರಾಂತಿಯಾಗಬೇಕು. ಸರಕಾರವೇ ಈ ಬಗ್ಗೆ ದೊಡ್ಡ ಹೆಜ್ಜೆ ಇಡಬೇಕು. ಅಂತೂ ಅನಕ್ಷರತೆಯಿಂದ ಉಂಟಾಗುವ ಸಮಸ್ಯೆಯನ್ನು ತಾಳ್ಮೆಯಿಂದ ಎದುರಿಸಬೇಕಾಗಿದೆ. ಹಳ್ಳಿಗರಿಗೆ ತಿಳಿವಳಿಕೆ ನೀಡಬೇಕು. ಇದಕ್ಕಾಗಿ ಸಿಬ್ಬಂದಿ ವರ್ಗದಲ್ಲಿ ತಾಳ್ಮೆಯ ಆವಶ್ಯಕತೆ ತುಂಬಾ ಇದೆ. ಹಾಗಿದ್ದರೆ ಮಾತ್ರ ದೇಶದ ಗ್ರಾಮೀಣ ಅಭಿವೃದ್ಧಿಯಲ್ಲಿ ಸಿಬ್ಬಂದಿಯವರೂ ಅಳಿಲ ಸೇವೆ ಸಲ್ಲಿಸಿದಂತಾಗುವುದು. ಕಾರ್ಯಸಾರ್ಥಕತೆಯ ದೃಷ್ಟಿಯಿಂದ ಇದು ತುಂಬಾ ಆವಶ್ಯಕ. ಪ್ರಾದೇಶಿಕ ಭಾಷೆಯನ್ನು ಪ್ರತಿ ರಾಜ್ಯದ ಎಲ್ಲಾ ಬಳಕೆಗೆ ತರಬೇಕು. ಪ್ರತಿ ರಾಜ್ಯದಲ್ಲೂ ಎಲ್ಲಾ ಬ್ಯಾಂಕುಗಳ ಶಾಖೆಗಳು ಒಟ್ಟು ಸೇರಿ ಒಂದೇ ರೀತಿಯ ನಮೂನೆಗಳನ್ನು ಸರಳ ಭಾಷೆಯಲ್ಲಿ ತಯಾರಿಸಬೇಕು. ಇದರಿಂದ ಗ್ರಾಮೀಣ ಶಾಖಾ ಸಿಬ್ಬಂದಿಯವರ ಸಾಕಷ್ಟು ಸಮಸ್ಯೆಗಳು ಕಮ್ಮಿ ಆಗಬಹುದು. ಹಾಗೆಯೇ, ಗ್ರಾಮೀಣ ಹಿನ್ನೆಲೆಯಿರುವ ಅಭ್ಯರ್ಥಿಗಳನ್ನು ಸಮನಾಗಿ ನೇಮಿಸಿಕೊಳ್ಳಬೇಕು. ಅಂತಹವರು ಹಳ್ಳಿಯ ವಾತಾವರಣಕ್ಕೆ ಒಗ್ಗಿ ಬ್ಯಾಂಕಿಂಗ್ ಕ್ಷೇತ್ರದ ಗ್ರಾಮೀಣ ವಲಯಗಳಲ್ಲೂ ಆರೋಗ್ಯಕರ ಬೆಳವಣಿಗೆಗೆ ಸಹಕಾರಿಯಾಗುವುದರಲ್ಲಿ ಸಂದೇಹವಿಲ್ಲ. ಆದರೆ ಸ್ಥಳೀಯರನ್ನು ಅವರದೇ ಹಳ್ಳಿಗಳಿಗೆ ವರ್ಗಾಯಿಸುವುದು ಸೂಕ್ತವಲ್ಲ. ಯಾಕೆಂದರೆ ಹಳ್ಳಿಯ ಒಳರಾಜಕೀಯ ಹಾಗೂ ಸಂಬಂಧ ಇರುವುದರಿಂದ ಸ್ವಜನ ಪಕ್ಷಪಾತಕ್ಕೆ ಎಡೆ ಉಂಟಾಗಿ, ವ್ಯವಸ್ಥಾಪಕರು ಮತ್ತು ಸಿಬ್ಬಂದಿ ನಿಷ್ಪಕ್ಷವಾಗಿ ಕಾರ್ಯ ನಿರ್ವಹಿಸುವುದು ಕಷ್ಟವಾಗುತ್ತದೆ. ಈ ಸಮಸ್ಯೆ ಹೆಚ್ಚಾಗಿ ಸಹಕಾರಿ ಬ್ಯಾಂಕು ಶಾಖೆಗಳಲ್ಲಿ ಕಂಡುಬರುತ್ತವೆ. ಅಲ್ಲಿಯ ಸಿಬ್ಬಂದಿಯವರ ಗುಂಪಿನವರು ಮಾತ್ರ ವ್ಯವಹರಿಸಲು ಬರುತ್ತಾರೆ. ಇದರಿಂದಾಗಿ ಬ್ಯಾಂಕುಗಳು ತಮ್ಮ ಮೂಲ ಗುರಿ ತಪ್ಪಿದಂತಾಗುತ್ತದೆ.

ಗ್ರಾಮಾಂತರ ಬ್ಯಾಂಕು ಶಾಖೆಗಳಲ್ಲಿ ಹೆಚ್ಚುಹೆಚ್ಚು ಸಿಬ್ಬಂದಿಯ ಆವಶ್ಯಕತೆಯಿರುವುದರಿಂದ ಹಾಗೆಯೇ ಮೇಲೆ ವಿವರಿಸಿದ ಸಮಸ್ಯೆಗಳ ಪರಿಹಾರವೂ ಆಗಬೇಕಾದ್ದರಿಂದ, ಅದಕ್ಕೆ ತಕ್ಕಂತಹ ಸಿಬ್ಬಂದಿಯ ತಯಾರಿಯಾಗಬೇಕು. ಇದಕ್ಕಾಗಿ ತರಬೇತಿಯ ಅಗತ್ಯವಿದೆ. ಇದು ಎಲ್ಲಾ ವಾಣಿಜ್ಯ, ಸಹಕಾರಿ ಹಾಗೂ ಗ್ರಾಮೀಣ ಬ್ಯಾಂಕುಗಳಿಗೂ ಅನ್ವಯಿಸುತ್ತದೆ. ಎಲ್ಲಾ ಮಟ್ಟದ ಉದ್ಯೋಗಿಗಳಿಗೂ ವಿವಿಧ ರೀತಿಯ ತರಬೇತಿ ಕೊಡಬೇಕು. ಬ್ಯಾಂಕಿನ ಗ್ರಾಮೀಣ ಶಾಖೆಗಳ ಬಗ್ಗೆ ಹಾಗೂ ಈ ಕ್ಷೇತ್ರದ ಕಷ್ಟನಿಷ್ಟದ ಬಗ್ಗೆ ಚೆನ್ನಾಗಿ ತಿಳುವಳಿಕೆ ನೀಡಿ ಗ್ರಾಮೀಣ ಬ್ಯಾಂಕು ವ್ಯವಹಾರಗಳಲ್ಲಿ ಉತ್ತಮ ವಾತಾವರಣ ಸೃಷ್ಟಿಸಿಕೊಳ್ಳಬೇಕಾದದ್ದು ತರಬೇತಿ ಕೇಂದ್ರಗಳ ಮುಖ್ಯ ಗುರಿಯಾಗಬೇಕು. ಪ್ರತಿಯೊಂದು ಬ್ಯಾಂಕೂ ತರಬೇತಿಯ ಪ್ರಾಮುಖ್ಯದ ಬಗ್ಗೆ ಚಿಂತನೆ ಮಾಡಬೇಕು.

**ವೈಯಕ್ತಿಕ ಸಮಸ್ಯೆಗಳು**

ವೈಯಕ್ತಿಕ ಸಮಸ್ಯೆಗಳಡಿಯಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ವಿಚಾರಗಳು ಇವು—ಶಾಖೆ ಇರುವ ಜಾಗಕ್ಕೆ ಹೋಗಿಬರುವುದು,ಸಾರಿಗೆ ಸೌಲಭ್ಯ,ಉಳಕೊಳ್ಳಲು ಮನೆಯ ಅಭಾವ, ಶಾಲೆಗಳಿಲ್ಲದಿರುವುದು, ಊಟದ ವ್ಯವಸ್ಥೆ, ವೈದ್ಯಕೀಯ ಸವಲತ್ತು ಹಾಗೂ ರಜಾ ಹಾಕುವಲ್ಲಿ

ಹಾಗೂ ಬದಲಿ ವ್ಯವಸ್ಥೆಯಲ್ಲಿ ಎದುರಿಸಬೇಕಾದ ಎಡರು ತೊಡರುಗಳು.

ಸಾರಿಗೆ ವ್ಯವಸ್ಥೆ : ಸಿಬ್ಬಂದಿಯ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಗ್ರಾಮೀಣ ಶಾಖೆಗೆ ಸಮಯಕ್ಕೆ ಸರಿಯಾಗಿ ಸೇರುವುದು ಅನಿವಾರ್ಯ. ಇದಕ್ಕಾಗಿ ಬಸ್ಸಿನ ವ್ಯವಸ್ಥೆ ಇಲ್ಲದಿರುವುದು ಸರ್ವೇಸಾಮಾನ್ಯ. "ಗಳಿಗೆ ತಪ್ಪಿದರೆ ಗುಳಿಗೆ ನಷ್ಟ" ಎಂಬಂತೆ ಬಸ್ಸು ತಪ್ಪಿದರೆ ಶಾಖೆಗೆ ಹೋಗುವಂತಿಲ್ಲ. ನಗದು ಕೋಠಿ ಬೀಗದಕೈಯನ್ನು ಹೊಂದಿರುವವರು ಹೇಗಾದರೂ ಶಾಖೆ ತಲುಪಬೇಕಾಗುತ್ತವೆ. ಹಾಗೆಯೇ ಮನೆ ಸೇರುವಾಗ ಪಡುವ ಬವಣೆಯಂತೂ ವರ್ಣಿಸಲಸಾಧ್ಯವಾದಂತಹದು. ಕಾಲ್ನಡಿಗೆಯಲ್ಲಿಯೇ ಎಷ್ಟೋ ದೂರ ಹೋಗಿಬರುವ ಪ್ರಸಂಗಗಳಿವೆ.

ವಸತಿ ಸೌಲಭ್ಯ : ಸಾಮಾನ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಉಳಕೊಳ್ಳಲು ವ್ಯವಸ್ಥೆ ಅಂದರೆ ಬಾಡಿಗೆ ಮನೆಗಳು ಇರುವುದಿಲ್ಲ. ಹಾಗಾಗಿ ಮನೆ ಸಿಗುವ ಕಡೆಯಿಂದ ದಿನಾ ಪ್ರಯಾಣ ಮಾಡಬೇಕಾಗುತ್ತದೆ.

ಊಟ-ಉಪಾಹಾರ : ಗ್ರಾಮೀಣ ಶಾಖೆಗಳಿರುವಲ್ಲಿ ಊಟ ಉಪಾಹಾರ ಒಂದು ದೊಡ್ಡ ಸಮಸ್ಯೆಯೆಂದೇ ಹೇಳಬೇಕು. ಎಷ್ಟೋ ಮಂದಿ ಬುತ್ತಿ ಕಟ್ಟಿಕೊಂಡು ಹೋಗಬೇಕಾಗುತ್ತದೆ ಅಥವಾ ಬ್ರೆಡ್ಡು ಮುಂತಾದ ತಿಂಡಿಯೊಂದಿಗೆ ಮಧ್ಯಾಹ್ನದ ಹಸಿವು ನೀಗಿಸಬೇಕಾಗುತ್ತದೆ. ಕಾಫಿ, ಚಹಾ ಪ್ರಿಯರಂತೂ ಇದರ ಕೊರತೆಯಿಂದ ಅಂಕೆ-ಸಂಖ್ಯೆಗಳೊಂದಿಗೆ ಹೋರಾಡುವಾಗ ತಪ್ಪಿ ತಾಳ್ಮೆ ಕಳೆದುಕೊಳ್ಳುವ ಸನ್ನಿವೇಶಗಳು ಬರುವುದು ಸಹಜ.

ವೈದ್ಯಕೀಯ ಸವಲತ್ತು : ವೈದ್ಯಕೀಯ ಸವಲತ್ತು ಇಲ್ಲದಿರುವುದರಿಂದ ಸಿಬ್ಬಂದಿಯವರು ಸಂಸಾರದ ಸಮೇತ ಹಳ್ಳಿಗಳಿಗೆ ಹೋಗುವುದಕ್ಕೆ ಹಿಂಜರಿಯಬೇಕಾಗುತ್ತದೆ.

ಶಾಲೆಗಳು : ಮೇಲಿನ ಎಲ್ಲಾ ತೊಂದರೆಗಳನ್ನು ನಿವಾರಿಸಿದಲ್ಲಿ ಪಾಠಶಾಲೆಗಳಿಲ್ಲದಿರುವುದು ಸಂಸಾರಿಗಳದ್ದೊಂದು ಬಿಡಿಸಲಾಗದ ಸಮಸ್ಯೆ. ರಜಾಸೌಲಭ್ಯದ ಉಪಯೋಗ, ಗ್ರಾಮೀಣ ಶಾಖೆಗಳಲ್ಲಿರುವ ಸಿಬ್ಬಂದಿಯವರಿಗೆ ರಜಾ ಬೇಕಾದಾಗ ಉಪಯೋಗಿಸುವ ಅವಕಾಶ ಇರುವುದಿಲ್ಲ. ಅಲ್ಲಿಯ ಸಿಬ್ಬಂದಿಗೆ ಒಂದು ದಿನದ ರಜೆ ಬೇಕಾದರೂ ಹತ್ತಿರದ ಅಥವಾ ನೆರೆಯ ಶಾಖೆಯನ್ನವಲಂಬಿಸಬೇಕಾಗುತ್ತದೆ. ಏನೇ ತೊಂದರೆ ಇದ್ದರೂ ಬದಲಿಗೆ ಒಬ್ಬರು ಬರದಿದ್ದಲ್ಲಿ ಈ ಸಿಬ್ಬಂದಿಯವರಿಗೆ ರಜೆ ಸಿಗದಿರುವುದು ಒಂದು ದುರಂತವೆಂದೇ ಹೇಳಬಹುದು.

ವೈಯಕ್ತಿಕ ಸಮಸ್ಯೆಗಳು ಮೇಲ್ನೋಟಕ್ಕೆ ಮಾಮೂಲಿಯಾಗಿ ಕಂಡು ಅಷ್ಟು ಕಟು ಕಾಣದಿದ್ದರೂ, ಇವು ಸಿಬ್ಬಂದಿಯ ಜನರ ಮಾನಸಿಕ ತುಮುಲವನ್ನು ಹೆಚ್ಚಿಸುವುದು. ಹಾಗೆಯೇ ಕೆಲಸದಲ್ಲಿ ಸಂಪೂರ್ಣ ಏಕಾಗ್ರತೆ ಸಾಧ್ಯವಿಲ್ಲ. ಈ ಸಮಸ್ಯೆಗಳ ಫಲವಾಗಿ ಗ್ರಾಮೀಣ ಶಾಖಾ ಸಿಬ್ಬಂದಿಯವರು ಬ್ಯಾಂಕಿನ ಯಾವುದೇ ಧ್ಯೇಯೋದ್ದೇಶಗಳಿಗೆ ಬದ್ಧರಾಗಿ ದುಡಿಯುವಲ್ಲಿ ಅಸಮರ್ಥರಾಗುತ್ತಾರೆ. ಶಾಖೆಗೆ ಹೋದ ಕೂಡಲೇ ಸಾಯಂಕಾಲ ಹಿಂದಿರುಗುವ ಯೋಚನೆ, ಕೆಲಸ ಮುಗಿಸಿ ಸೇರಿಸುವ ಕಾತರ, ಬೇಗ ಮನೆ ಸೇರುವ ತರಾತುರಿ. ಸಮಸ್ಯೆಯನ್ನು ನಿವಾರಿಸುವುದು ಸುಲಭವಲ್ಲದಿದ್ದರೂ ಸೃಜನಾತ್ಮಕ ಪರಿಹಾರದ ಅಗತ್ಯವಿದೆ. ಬ್ಯಾಂಕು, ಆಡಳಿತ ವರ್ಗ ಮತ್ತು ಸರಕಾರ ಇದಕ್ಕೆ ತಕ್ಕ ವ್ಯವಸ್ಥೆ ಕೊಡಬೇಕು. ಇಂತಹ ಶಾಖೆಗಳಿರುವ ಹಳ್ಳಿಗಳಲ್ಲಿ ತಮ್ಮವೇ ವಸತಿ ಸೌಲಭ್ಯವನ್ನು ಎಲ್ಲಾ ಸಿಬ್ಬಂದಿಯವರಿಗೂ ಒದಗಿಸುವ ಏರ್ಪಾಟು ಮಾಡಬೇಕು. ಇದರಿಂದ ಸಿಬ್ಬಂದಿಯ ಬಹುಮಟ್ಟಿನ ವೈಯಕ್ತಿಕ ಸಮಸ್ಯೆಗೆ ಕಿಂಚಿತ್ ಪರಿಹಾರ ದೊರೆತಂತಾಗುವುದು. ಹೊಸತಾಗಿ ಬರುವ ಉದ್ಯೋಗಿಗಳಿಗೆ ಸಂಪೂರ್ಣ ನೆರವು ನೀಡುವಂತೆ ಶಾಖಾ-ವ್ಯವಸ್ಥಾಪಕರಿಗೆ ತಿಳಿಸಿ, ವ್ಯವಸ್ಥಾಪಕರು ಈ ಉದ್ಯೋಗಿಯ ಸಮಸ್ಯೆಯನ್ನು ಪರಿಹರಿಸಲು ಸಂಪೂರ್ಣ ಸಹಕಾರ ನೀಡಬೇಕು. ಸಿಬ್ಬಂದಿಗೆ ಬೇಕಾದ ರಜೆ ಹಾಕಲು ಅನುಕೂಲವಾಗುವಂತೆ ಶೀಘ್ರ ಬದಲಿ ವ್ಯವಸ್ಥೆಗಾಗಿ ಕಟ್ಟುನಿಟ್ಟಿನ ನಿಯಮಾವಳಿಯನ್ನು ರೂಪಿಸಿ, ಈ ಬಗ್ಗೆ ಹತ್ತಿರದ ದೊಡ್ಡ ಶಾಖೆಗೆ ಆದೇಶಿಸಬೇಕು. ಹಾಗೆಯೇ ಇನ್ನಿತರ ಸಮಸ್ಯೆಗಳಾದ ಜಾತಿಭೇದ, ಜನಜೀವನ, ಕೋಮು ಹಾಗೂ ಸುತ್ತಮುತ್ತಲಿನ ಸಾಮಾಜಿಕ ವಾತಾವರಣವನ್ನವಲಂಬಿಸಿ ವರ್ಗಾವಣೆಯನ್ನು ಮಾಡಬೇಕು. ಇದಕ್ಕೆ ಸರಿಯಾದ ನಿಯಮಾವಳಿಯ ಅಗತ್ಯವಿದೆ.

ಇನ್ನೊಂದು ಮುಖ್ಯ ವಿಷಯವೆಂದರೆ, ಪಟ್ಟಣದ ಬ್ಯಾಂಕು ಸಿಬ್ಬಂದಿಗೂ ಗ್ರಾಮೀಣ ಶಾಖಾ ಸಿಬ್ಬಂದಿಗೂ ಇರುವ ವೇತನದ ಅಂತರವನ್ನು ಬದಲು ಮಾಡಬೇಕು. ನಗರದಲ್ಲಿ ಸಿಗುವ ವಿಶೇಷ ಸಂಭಾವನೆ ಅಥವಾ ಭತ್ಯಗಳು ಗ್ರಾಮೀಣ ಶಾಖಾ ಸಿಬ್ಬಂದಿಗೂ ದೊರಕುವಂತೆ ಮಾಡಬೇಕು. ಯಾಕೆಂದರೆ ನಗರದಲ್ಲಿರುವ ಜೀವನಸೌಕರ್ಯವನ್ನು ಪಡೆಯಲು ಹೆಚ್ಚಿನ ಭತ್ಯೆಯ ಅವಶ್ಯಕತೆಯಿದ್ದಂತೆ ಗ್ರಾಮೀಣ ಪ್ರದೇಶದಲ್ಲಿ ಬದುಕಲು ಅಷ್ಟೇ ಕಷ್ಟಪಡಬೇಕಾಗುತ್ತದೆ. ಈ ವೇತನ ವ್ಯತ್ಯಾಸ ಕಮ್ಮಿಯಾದಾಗ ಗ್ರಾಮೀಣ ಶಾಖೆಗಳಿಗೂ ಸಿಬ್ಬಂದಿ ಬಂದೇ ಬರುತ್ತಾರೆ. ಸಮಸ್ಯೆಗಳಿಗೊಂದು ತಾತ್ಕಾಲಿಕ ಪರಿಹಾರ ದೊರೆತಂತಾಗುತ್ತದೆ.

ಒಟ್ಟಿನಲ್ಲಿ ಗ್ರಾಮೀಣ ಶಾಖಾ ಸಿಬ್ಬಂದಿಯ ಸಮಸ್ಯೆಗಳ ಬಗ್ಗೆ ಸರಕಾರ ಮತ್ತು ಬ್ಯಾಂಕು ಆಡಳಿತ ವರ್ಗದವರು ತಮ್ಮ ತುರ್ತುಗಮನ ಹರಿಸುತ್ತಾ ಇರಬೇಕು. ಅದಿಲ್ಲದಿದ್ದಲ್ಲಿ ಖಂಡಿತವಾಗಿಯೂ ಬ್ಯಾಂಕುಗಳು ಹಮ್ಮಿಕೊಂಡ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರುವುದು ಕಷ್ಟ.

---

# ಭಾರತದ ಬ್ಯಾಂಕುಗಳ ಸಂಘ

ಟಿ. ಕೆ. ರಂಗನಾಥ

"ಬ್ಯಾಂಕ್ ಉದ್ಯೋಗಿಗಳು/ಅಧಿಕಾರಿಗಳು ನಡೆಸಲಿರುವ ಸಂಪು ನ್ಯಾಯಬಾಹಿರವೆಂದು ಭಾರತದ ಬ್ಯಾಂಕುಗಳ ಸಂಘದ ವಕ್ತಾರರು ತಿಳಿಸಿದರು."

"ನಾಲ್ಕನೆಯ ದ್ವಿಪಕ್ಷ ಒಪ್ಪಂದದ ಮಾತುಕತೆಯಲ್ಲಿ ನಿಧಾನನೀತಿ ಅನುಸರಿಸುತ್ತಿರುವ ಭಾರತೀಯ ಬ್ಯಾಂಕುಗಳ ಸಂಘದ ಧೋರಣೆಯನ್ನು ಪ್ರತಿಭಟಿಸಿ ಬ್ಯಾಂಕು ಉದ್ಯೋಗಿಗಳ ಕಾರ್ಮಿಕ ಸಂಘಗಳು ಏಪ್ರಿಲ್ 4ರಿಂದ 10ರ ವರೆಗೆ ಬೇಡಿಕೆ ಸಪ್ತಾಹ ಆಚರಿಸಿದುವು."

"ಅಖಿಲ ಭಾರತ ಬ್ಯಾಂಕ್ ಠೇವಣಿದಾರರ ಸಂಘದ ಕಾರ್ಯದರ್ಶಿಯವರು ಭಾರತೀಯ ಬ್ಯಾಂಕ್‌ಗಳ ಅಧ್ಯಕ್ಷರಿಗೆ ಠೇವಣಿದಾರರ ಪರವಾಗಿ ಬೇಡಿಕೆಗಳ ಪಟ್ಟಿಯೊಂದನ್ನು ಸಲ್ಲಿಸಿ, ಬ್ಯಾಂಕ್ ಉದ್ಯೋಗಿಗಳ ಬೇಡಿಕೆಗಳನ್ನು ಚರ್ಚಿಸುವ ಸಮಯದಲ್ಲಿ ತಮ್ಮ ಬೇಡಿಕೆಗಳನ್ನೂ ಚರ್ಚಿಸಬೇಕೆಂದು ಒತ್ತಾಯಿಸಿದ್ದಾರೆ."

ಇಂಥ ಸುದ್ದಿಗಳನ್ನು ಆಗಿಂದಾಗ್ಗೆ ವೃತ್ತಪತ್ರಿಕೆಗಳಲ್ಲಿ ನಾವು ಓದುತ್ತೇವೆ.

ಭಾರತೀಯ ಬ್ಯಾಂಕ್‌ಗಳ ಸಂಘ ಎಂದರೆ ಬ್ಯಾಂಕ್ ಉದ್ಯೋಗಿಗಳ ವೇತನ ಭತ್ಯಗಳ ಬೇಡಿಕೆಗಳನ್ನು ಚರ್ಚಿಸಲು ಬ್ಯಾಂಕುಗಳು ನಿರ್ಮಿಸಿಕೊಂಡಿರುವ ವೇದಿಕೆ ಎಂಬ ತೀರ್ಮಾನಕ್ಕೆ ನಮ್ಮಲ್ಲಿ ಹಲವರು ಬಂದಿರಬಹುದು. ಭಾರತದ ಬ್ಯಾಂಕ್‌ಗಳ ಸಂಘದ ಧ್ಯೇಯೋದ್ದೇಶಗಳು ಉದ್ಯೋಗಿಗಳ ವೇತನ ಭತ್ಯಗಳನ್ನು ನಿರ್ಧರಿಸುವುದಕ್ಕಷ್ಟೇ ಸೀಮಿತವಾಗಿರದೆ ಇತರ ಹಲವು ಮಹತ್ತರ ಉದ್ದೇಶಗಳನ್ನೂ ಹೊಂದಿದೆ.

1948ರಲ್ಲಿ ಸ್ಥಾಪಿತವಾದ ಭಾರತದ ಬ್ಯಾಂಕುಗಳ ಸಂಘದಲ್ಲಿ 1982ರ ಡಿಸೆಂಬರ್ ವೇಳೆಗೆ 83 ಸದಸ್ಯರಿದ್ದರು. ಈ ಸದಸ್ಯತ್ವದಲ್ಲಿ 7 ಸಹಕಾರಿ ಬ್ಯಾಂಕುಗಳೂ, 15 ವಿದೇಶಿ ಸ್ವಾಮ್ಯದ ಬ್ಯಾಂಕುಗಳೂ, 32 ಖಾಸಗಿ ಕ್ಷೇತ್ರದ ಬ್ಯಾಂಕುಗಳೂ, 22 ಸರಕಾರಿ ಕ್ಷೇತ್ರದ ಬ್ಯಾಂಕುಗಳೂ, 8 ಸ್ಟೇಟ್ ಬ್ಯಾಂಕುಗಳೂ ಸೇರಿವೆ.

ಈ ಸಂಘದ ಮೂಲ ಉದ್ದೇಶ, ಭಾರತದ ಇಡೀ ಬ್ಯಾಂಕಿಂಗ್ ಉದ್ಯಮಕ್ಕೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಒಟ್ಟಾಗಿ ಚಿಂತನೆ ನಡೆಸುವ ವೇದಿಕೆಯೊಂದನ್ನು ಒದಗಿಸುವುದು ಹಾಗೂ ಸಮಸ್ಯೆಗಳ ಪರಿಹಾರದ ಬಗ್ಗೆ ಸದಸ್ಯ ಬ್ಯಾಂಕುಗಳಿಗೆ ಸಲಹಾಸೇವೆಯನ್ನು ನೀಡುವುದು. ಮುಖ್ಯವಾಗಿ ಈ ಮುಂದಿನ ಕ್ಷೇತ್ರಗಳಲ್ಲಿ ಭಾರತೀಯ ಬ್ಯಾಂಕುಗಳ ಸಂಘ ವಿಶೇಷ ಆಸಕ್ತಿ ಹೊಂದಿದೆ:

* ಬ್ಯಾಂಕಿಂಗಿನ "ವ್ಯವಸ್ಥೆಗಳ ಆಯೋಜನೆ" (ಸಿಸ್ಟಮ್ಸ್ ಪ್ಲಾನಿಂಗ್), 'ಪ್ರಕ್ರಿಯೆ' (ಪ್ರೊಸೀಜರ್), 'ನಿರ್ವಹಣೆ' (ಆಪರೇಷನ್ಸ್), 'ಸಂರಚನೆ' (ಸ್ಟ್ರಕ್ಚರ್), 'ಆಡಳಿತ ಪದ್ಧತಿ' (ಅಡ್ಮಿನಿಸ್ಟ್ರೇಷನ್) ಇವುಗಳ ಬಗೆ ಹೊಸ ಪರಿಕಲ್ಪನೆಗಳ ಸೃಷ್ಟಿ ಹಾಗೂ ಸದಸ್ಯ ಬ್ಯಾಂಕುಗಳೊಂದಿಗೆ ಅವುಗಳ ವಿನಿಮಯ.
* ಪ್ರಮುಖ ಬ್ಯಾಂಕಿಂಗ್ ಸಮಸ್ಯೆಗಳ ಬಗ್ಗೆ, ಬ್ಯಾಂಕಿಂಗ್ ನೀತಿ ಧೋರಣೆಗಳ ಬಗ್ಗೆ ಸದಸ್ಯ ಬ್ಯಾಂಕುಗಳಲ್ಲಿ ಏಕಾಭಿಪ್ರಾಯ ರೂಪಿಸುವುದು.
* ಬ್ಯಾಂಕುಗಳ ನಿರ್ವಹಣೆ ಹಾಗೂ ಪರಿಸರಕ್ಕೆ ಸಂಬಂಧಿಸಿದ ಅಂಕಿಅಂಶಗಳ ಆಕರಗಳನ್ನು ಗುರುತಿಸುವುದು, ಸಂಗ್ರಹಿಸುವುದು, ಮೌಲ್ಯಮಾಪನ, ವ್ಯಾಖ್ಯಾನ ಮತ್ತು ಅಂಕಿಅಂಶಗಳ ಪುನಃಸ್ವಾಧೀನ (ರಿಟ್ರೀವಲ್).
* ಬ್ಯಾಂಕುಗಳಲ್ಲಿ ಸಿಬ್ಬಂದಿ ನಿರ್ವಹಣೆಯನ್ನು ಉತ್ತಮಪಡಿಸುವುದು ಹಾಗೂ ಬ್ಯಾಂಕುಗಳ ವ್ಯವಸ್ಥಾಪಕ ವರ್ಗದ ಪರವಾಗಿ ಕಾರ್ಮಿಕ/ಅಧಿಕಾರಿ ಸಂಘಗಳೊಡನೆ ಸಂಧಾನ ನಡೆಸುವುದು.
* ಬ್ಯಾಂಕುಗಳ ಸಾಮಾಜಿಕ ಹೊಣೆಗಾರಿಕೆಯನ್ನು ಬಿಂಬಿಸುವ "ಸಾರ್ವಜನಿಕ ಸಂಪರ್ಕ"ಗಳನ್ನು ಏರ್ಪಡಿಸುವುದು.

ಭಾರತದ ಬ್ಯಾಂಕುಗಳ ಸಂಘದ ಮುಖ್ಯಕಛೇರಿ ಮುಂಬೈಯಲ್ಲಿದೆ. ಭಾರತದ 10 ಪ್ರಮುಖ ನಗರಗಳಲ್ಲಿ ಸಂಘದ ಸ್ಥಳೀಯ ಕಛೇರಿಗಳಿವೆ. ಸಂಘವನ್ನು ಭಾರತೀಯ ಕಂಪನಿಗಳ ಅಧಿನಿಯಮದ 25ನೆಯ ವಿಧಿಯನ್ವಯ ಕಂಪನಿಯೆಂದು ನೋಂದಾಯಿಸಲು ಅಗತ್ಯವಾದ ಕ್ರಮವನ್ನು ಕೈಗೊಳ್ಳಲಾಗಿದೆ. "ನಿಯಮಿತ" ಎನ್ನುವ ಪದವನ್ನು ಬಿಟ್ಟು "ಭಾರತದ ಬ್ಯಾಂಕುಗಳ ಸಂಘ" ಎಂಬ ಹೆಸರಿನಲ್ಲಿ ನೋಂದಾಯಿಸುವಂತೆ ಕೋರಿ ವಲಯ ನಿರ್ದೇಶಕರು ಕಂಪನಿ ಮಂಡಳಿಯವರಿಗೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ಸಲ್ಲಿಸಿದ್ದಾರೆ.

ಸಂಘದ ಆಡಳಿತವನ್ನು ವ್ಯವಸ್ಥಾಪನ ಸಮಿತಿಯೊಂದು ನೋಡಿಕೊಳ್ಳುತ್ತದೆ. ಈ ಸಮಿತಿ ತನ್ನಲ್ಲೇ ಒಬ್ಬ ಅಧ್ಯಕ್ಷರನ್ನೂ ಮೂರು ಮಂದಿ ಉಪಾಧ್ಯಕ್ಷರನ್ನೂ ಒಬ್ಬ ಗೌರವ ಕಾರ್ಯದರ್ಶಿಯನ್ನೂ ಆಯ್ಕೆ ಮಾಡುತ್ತದೆ. ವ್ಯವಸ್ಥಾಪನ ಸಮಿತಿಯ ಸದಸ್ಯರ ಆಯ್ಕೆ ವಾರ್ಷಿಕ ಸದಸ್ಯರ ಸಭೆಯಲ್ಲಿ ನಡೆಯುತ್ತದೆ. ಸರಕಾರಿ, ಖಾಸಗಿ, ಸಹಕಾರಿ, ಹಾಗೂ ವಿದೇಶಿ ಸ್ವಾಮ್ಯದ ಬ್ಯಾಂಕುಗಳಿಗೆ ಸಮಿತಿಯಲ್ಲಿ ಪ್ರಾತಿನಿಧ್ಯವಿರುತ್ತದೆ.

ಸಂಘ ತನ್ನ ದೈನಂದಿನ ವ್ಯವಹಾರವನ್ನು ನೋಡಿಕೊಳ್ಳಲು ಕಾರ್ಯದರ್ಶಿಯೊಬ್ಬರನ್ನು ನೇಮಿಸಿಕೊಂಡಿದ್ದು, ಇತರ ಕೆಲಸ ಕಾರ್ಯಗಳನ್ನು ನೋಡಿಕೊಳ್ಳಲು ಹಾಗೂ ಸೂಕ್ತ ಸಲಹೆ ಸೂಚನೆಗಳನ್ನು ನೀಡಲು ಅನುಕೂಲವಾಗುವಂತೆ ಹಲವು ಬ್ಯಾಂಕುಗಳ ಪರಿಣತ ಸಿಬ್ಬಂದಿಯ ಸೇವೆಯ ಎರವಲು ಪಡೆಯುವುದರ ಜೊತೆಗೆ ತಾನೇ ಅರ್ಥಶಾಸ್ತ್ರಜ್ಞರನ್ನೂ ಕಾನೂನು ಹಾಗೂ ಔದ್ಯೋಗಿಕ ಸಂಬಂಧಿ ಸಲಹಾಕಾರರನ್ನೂ ಗ್ರಂಥಪಾಲರನ್ನೂ ಕಾನೂನು ಅಧಿಕಾರಿಯನ್ನೂ ವ್ಯವಸ್ಥಾಪನ ಸೇವಾ ಸಲಹಾಧಿಕಾರಿಗಳನ್ನೂ ನೇಮಕ ಮಾಡಿಕೊಂಡಿದೆ.

ಭಾರತದ ಬ್ಯಾಂಕುಗಳ ಸಂಘ ಇದುವರೆಗೆ ಸಾಧಿಸಿರುವ ಕೆಲವು ಮಹತ್ತರ ಸಾಧನೆಗಳು ಇವು :

ಭಾರತದಲ್ಲಿರುವ ಬ್ಯಾಂಕುಗಳು ತಮ್ಮ ಠೇವಣಿದಾರರಿಗೆ ವಿವಿಧ ಠೇವಣಿಗಳ ಮೇಲೆ ನೀಡುವ ಬಡ್ಡಿಯ ದರ ಹಾಗೂ ಬಡ್ಡಿ ಪಾವತಿಯ ಕಾಲಾವಧಿಯನ್ನು ಭಾರತೀಯ ರಿಸರ್ವ್ ಬ್ಯಾಂಕ್ ನಿರ್ಧರಿಸುತ್ತದೆ. ಯಾವುದೇ ಬ್ಯಾಂಕು ಈ ನಿರ್ದೇಶನಗಳನ್ನು ಚಾಚೂ ತಪ್ಪದೇ ಅನುಸರಿಸಬೇಕಾಗುತ್ತದೆ ಯಾದರೂ ಭಾರತದ ಬ್ಯಾಂಕುಗಳು ಈ ನಿಯಮಗಳ ಚೌಕಟ್ಟಿನಲ್ಲಿ ಒಂದರೊಡನೊಂದು ಸ್ಪರ್ಧಿಸಿ ಠೇವಣಿಗಳನ್ನು ಸಂಗ್ರಹಿಸಲು ಠೇವಣಿದಾರರಿಗೆ ಅಧಿಕ ಬಡ್ಡಿ ನೀಡುವ, ಆಮಿಷ ತೋರುವ, ತಪ್ಪುದಾರಿಗೆಳೆಯುವ ಜಾಹಿರಾತುಗಳನ್ನು ಪ್ರಕಟಿಸುವುದಲ್ಲದೇ ವಿಶೇಷ ಕೊಡುಗೆಗಳನ್ನು ನೀಡುವ ಬಹುಮಾನ ಯೋಜನೆಗಳನ್ನೊಳಗೊಂಡ ಠೇವಣಿ ಯೋಜನೆಗಳನ್ನು ರೂಪಿಸಿದ್ದುವು. ಈ ಅನಾರೋಗ್ಯಕರ ಪೈಪೋಟಿ ಎಲ್ಲ ಬ್ಯಾಂಕ್ ವ್ಯವಸ್ಥಾಪಕರ ಗಮನಕ್ಕೆ ಬಂದಿತ್ತು. ಸ್ವಯಂಮಾರಕವಾದ ಈ ಅನಾರೋಗ್ಯಕರ ಪೈಪೋಟಿಯನ್ನು ನಿಲ್ಲಿಸಲು ಭಾರತದ ಬ್ಯಾಂಕುಗಳ ಸಂಘ ಠೇವಣಿ ಸಂಗ್ರಹದ ನೀತಿಸಂಹಿತೆಯನ್ನು ರೂಪಿಸಿ ಅನುಷ್ಠಾನಕ್ಕೆ ತಂದಿತು. ಈ ನೀತಿಸಂಹಿತೆ ಹಾಗೂ ನಿಯಮಗಳ ಆಚರಣೆಯನ್ನು ಕಟ್ಟುನಿಟ್ಟಾಗಿ ಜಾರಿಗೆ ತರಲು ಸಂಘ ಬ್ಯಾಂಕುಗಳ ಹಿರಿಯ ವ್ಯವಸ್ಥಾಪಕರ ಸ್ಥಾಯೀಸಮಿತಿಯೊಂದನ್ನು ನೇಮಿಸಿದೆ.

ಭಾರತೀಯ ಬ್ಯಾಂಕುಗಳ ಸಂಘ ತನ್ನ ಸದಸ್ಯರಿಗೆ ಸಲ್ಲಿಸುತ್ತಿರುವ ಸೇವೆಗಳ ಪೈಕಿ, ಸಾರಿಗೆ ನಿರ್ವಾಹಕರ ಶಿಫಾರಸು ಬ್ಯಾಂಕುಗಳ ದೃಷ್ಟಿಯಿಂದ ಮುಖ್ಯವಾದುದು. ಭಾರತದಲ್ಲಿ ಪ್ರಸ್ತುತ ಜಾರಿಯಲ್ಲಿರುವ ಕಾನೂನಿನನ್ವಯ ಮೋಟಾರು ಸಾರಿಗೆ ಸಂಸ್ಥೆಗಳು ನೀಡುವ ರಶೀತಿಗಳನ್ನು "ಸರಕಿನ ಸ್ವಾಮ್ಯದ ದಾಖಲೆಗಳೆಂದು" ಪರಿಗಣಿಸಲಾಗುವುದಿಲ್ಲ. 1930ರ ಭಾರತದ ಸರಕು ಬಿಕರಿ ಅಧಿನಿಯಮದ ಕಲಮು 2(4)ರಲ್ಲಿ ಪಟ್ಟಿಮಾಡಿರುವ ಸಾರಿಗೆ ದಾಖಲೆಗಳಲ್ಲಿ ಮೋಟಾರು ಸಾರಿಗೆ ರಶೀತಿಯ ಹೆಸರಿರುವುದಿಲ್ಲ. ಹಾಗಾಗಿ ಬ್ಯಾಂಕಿನ ಹೆಸರಿಗೆ ಹಿಂಬರಹ ಮಾಡಲ್ಪಟ್ಟ "ಮೋಟಾರು ಸಾರಿಗೆ ರಸೀತಿ"ಗಳಲ್ಲಿ ನಮೂದಾದ ಸರಕಿನ ಸ್ವಾಮ್ಯ ಬ್ಯಾಂಕಿಗೆ ದೊರಕುವುದಿಲ್ಲ.

ಈ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಭಾರತದ ಬ್ಯಾಂಕುಗಳ ಸಂಘ ತನ್ನ ಸದಸ್ಯ ಬ್ಯಾಂಕುಗಳಿಗೆ ರಕ್ಷಣೆ ಒದಗಿಸುವ ಉದ್ದೇಶದಿಂದ ಸಾರಿಗೆ ಸಂಸ್ಥೆಗಳನ್ನು ಶಿಫಾರಸು ಮಾಡುವ ಯೋಜನೆಯೊಂದನ್ನು ರೂಪಿಸಿದೆ. ಈ ಯೋಜನೆಯನ್ವಯ ಏಳು ಅಥವಾ ಅದಕ್ಕಿಂತ ಹೆಚ್ಚಿನ ಸಾಗಣೆ ವಾಹನಗಳುಳ್ಳ ಸಾರಿಗೆ ಸಂಸ್ಥೆಗಳೊಡನೆ ಒಪ್ಪಂದವೊಂದನ್ನು ಮಾಡಿಕೊಂಡು, ಮೂರು ವರ್ಷಗಳ ಅವಧಿಗೆ ಅದು ಶಿಫಾರಸು ಮಾಡುತ್ತದೆ. ಈ ಒಪ್ಪಂದದ ಪ್ರಕಾರ ಸಾರಿಗೆ ನಿರ್ವಾಹಕರು ಬ್ಯಾಂಕಿನಿಂದ ಸಾಲಸೌಲಭ್ಯ ಪಡೆಯಬಯಸುವ ಸರಕು ರವಾನೆದಾರರಿಗೆ ನಿರ್ದಿಷ್ಟಪಡಿಸಿದ ನಮೂನೆಯಲ್ಲಿ ಸಾರಿಗೆ ರಸೀತಿಗಳನ್ನು ನೀಡುತ್ತವೆ. ಹಾಗೂ ಆ ಸರಕಿನ ಮೇಲೆ ಬ್ಯಾಂಕುಗಳಿಗಿರುವ ಆಸಕ್ತಿಯನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಆ ಸರಕನ್ನು ರಶೀತಿಯನ್ನು ಹಿಂತಿರುಗಿಸದೆ, ಬ್ಯಾಂಕಿನ ಪೂರ್ವಾನುಮತಿ ಇಲ್ಲದೆ ಹಿಂತಿರುಗಿಸಿದರೆ ಬ್ಯಾಂಕುಗಳಿಗುಂಟಾಗುವ ನಷ್ಟಕ್ಕೆ ಸಾರಿಗೆ ನಿರ್ವಾಹಕರು ಹೊಣೆಗಾರರಾಗುತ್ತಾರೆ.

ಭಾರತೀಯ ರಿಸರ್ವ್ ಬ್ಯಾಂಕ್‌ನ ಸಲಹೆಯ ಮೇರೆಗೆ 1980ರಲ್ಲಿ, ವಾಣಿಜ್ಯ ಬ್ಯಾಂಕುಗಳ ಗ್ರಾಮೀಣ ಶಾಖೆಗಳ ಶಾಖಾವ್ಯವಸ್ಥಾಪಕರು ತಮ್ಮ ಹೆಚ್ಚಿನ ವೇಳೆಯನ್ನು ಬೆಳವಣಿಗೆಯ ಚಟುವಟಿಕೆಗಳಲ್ಲಿ, ಉದರಿ ಮೇಲುಸ್ತುವಾರಿಯನ್ನು ಉತ್ತಮಪಡಿಸುವುದರಲ್ಲಿ ತೊಡಗಿಸಲು ಸಹಾಯಕವಾಗುವಂತೆ ಶಾಖೆಯ ಕೆಲಸದ ವೇಳೆಯನ್ನು ಬದಲಾಯಿಸುವುದರ ಬಗ್ಗೆ ಕಾರ್ಯತಂಡವೊಂದನ್ನು ರಚಿಸಿತ್ತು. ಆ ಸಂಘ ಸಲ್ಲಿಸಿದ ವರದಿ ಕೇಂದ್ರ ಸರಕಾರದ ವಿತ್ತ ಸಚಿವಾಲಯದ ಅರ್ಥವ್ಯವಹಾರಗಳ ಇಲಾಖೆಯ ಬ್ಯಾಂಕಿಂಗ್ ವಿಭಾಗದ ಪರಿಶೀಲನೆಯಲ್ಲಿದೆ.

ಸಲೀಸಾಗಿ ಮತ್ತು ಪರಿಣಾಮಕಾರಿಯಾಗಿ ಸೇವೆ ಸಲ್ಲಿಸಲು ಅನುಕೂಲವಾಗುವಂತೆ ತೀರುವೆಮನೆಯ ಸಾಮಾನ್ಯ ನಿಯಮಗಳನ್ನು ರೂಪಿಸುವಂತೆ ಭಾರತೀಯ ರಿಸರ್ವ್ ಬ್ಯಾಂಕ್ ಸಂಘವನ್ನು 1981ರಲ್ಲಿ ಕೋರಿತು. ಸಂಘ ಆದಕ್ಕಾಗಿ ರಚಿಸಿದ ಕಾರ್ಯತಂಡ ಸಲ್ಲಿಸಿದ ವರದಿ ಸಂಘದ ವ್ಯವಸ್ಥಾಪನ ಸಮಿತಿಯ ಅಂಗೀಕಾರ ಪಡೆದಿದೆ. ಈಗ ಇದು ಭಾರತೀಯ ರಿಸರ್ವ್ ಬ್ಯಾಂಕಿನ ಪರಿಶೀಲನೆಯಲ್ಲಿದೆ.

ತನ್ನ ಸದಸ್ಯ ಬ್ಯಾಂಕುಗಳಲ್ಲಿ ಗ್ರಾಹಕರ ಸೇವೆ, ಮನೆವಾರ್ತೆ (ಹೌಸ್ ಕೀಪಿಂಗ್), ಕಾನೂನಿಗೆ ಅನುಗುಣವಾಗಿ ಕಾಲಕಾಲಕ್ಕೆ ಸಲ್ಲಿಸಬೇಕಾದ ವಿವಿಧ ವರದಿಗಳ, ಅಂಕಿಅಂಶ

ಗಳ ಸಲ್ಲಿಕೆಯಲ್ಲಿ ಬ್ಯಾಂಕಿಂಗ್ ಉದ್ಯಮ ಎದುರಿಸುತ್ತಿರುವ ಸಮಸ್ಯೆಯ ಅಗಾಧತೆಯನ್ನು ನಿರ್ಧರಿಸಲು ಸಂಘದ ವ್ಯವಸ್ಥಾಪನ ಸಮಿತಿ 1980ರಲ್ಲಿ ಸಮಿತಿಯೊಂದನ್ನು ರಚಿಸಿತ್ತು. ಈ ಸಮಿತಿ ಕೆಳಸ್ತರದಲ್ಲಿ, ಅಂದರೆ ಶಾಖಾಮಟ್ಟದಲ್ಲಿ, ಇರುವ ಸಮಸ್ಯೆಯ ನಿಜವಾದ ಕಾರಣಗಳನ್ನು ವ್ಯವಸ್ಥಿತವಾಗಿ ವಿಶ್ಲೇಷಿಸಲು ಬೇಕಾದ ಅಂಕಿಅಂಶಗಳನ್ನು ಸಂಗ್ರಹಿಸುವ, ಸಮೀಕ್ಷೆಯೊಂದನ್ನು ನಡೆಸುವ ಹೊಣೆಯನ್ನು ವಿವಿಧ ಬ್ಯಾಂಕುಗಳ ವ್ಯವಸ್ಥಾಪರಿಣತರ (ಸಿಸ್ಟೆಮ್ ಸ್ಪೆಷಲಿಸ್ಟ್) ಅಧ್ಯಯನ ತಂಡವೊಂದಕ್ಕೆ ವಹಿಸಿತು. ಈ ಸಮೀಕ್ಷೆಯ ಫಲಿತಾಂಶಗಳನ್ನು ಸಂಘ ಗಣನೆಗೆ ತೆಗೆದುಕೊಂಡಿದೆ. ಉಪಗ್ರಹಗಳ ಉಪಯೋಗ ಪಡೆದು ಸಂಪರ್ಕಸಾಧನಗಳನ್ನು ಉತ್ತಮಪಡಿಸಬೇಕೆಂದು ಹೇಳಿದೆ. ಬ್ಯಾಂಕುಗಳಲ್ಲಿ ಯಾಂತ್ರೀಕರಣ, ಗಣಕೀಕರಣಗಳ ಆವಶ್ಯಕತೆಯನ್ನೂ ಒತ್ತಿಹೇಳಿದೆ.

'ವಿಶ್ವವ್ಯಾಪಿ ಅಂತರಬ್ಯಾಂಕ್ ವಿತ್ತೀಯ ದೂರ ಸಂಪರ್ಕ ಸಂಘದ' ಜಾಲವನ್ನು ಭಾರತದ ಬ್ಯಾಂಕುಗಳಿಗೆ ವಿಸ್ತರಿಸುವ ಬಗ್ಗೆ ಭಾರತ ಸರಕಾರದ ಹಣಕಾಸು ಸಚಿವಾಲಯದೊಡನೆ ಸಂಘದ ಅಧ್ಯಕ್ಷರು ಸಮಾಲೋಚನೆ ನಡೆಸಿ ಈ ಸೌಲಭ್ಯದ ವೆಚ್ಚ-ಪ್ರಯೋಜನಗಳ ತೌಲನಿಕ ಅಧ್ಯಯನ ನಡೆಸಲು ಅಂತರರಾಷ್ಟ್ರೀಯ ಬ್ಯಾಂಕಿಂಗ್‌ನಲ್ಲಿ ಸಕ್ರಿಯವಾಗಿ ಪಾಲುಗೊಳ್ಳುತ್ತಿರುವ ಸದಸ್ಯ ಬ್ಯಾಂಕುಗಳ ಪ್ರತಿನಿಧಿಗಳನ್ನೊಳಗೊಂಡ ತಾಂತ್ರಿಕ ತಂಡವೊಂದನ್ನು ರಚಿಸಿದರು. ಈ ಸಂಪರ್ಕಜಾಲದ ಸೌಲಭ್ಯಗಳನ್ನು ಸದಸ್ಯರಿಗೆ ವಿವರಿಸಲು ಮುಂಬಯಿ, ದೆಹಲಿ, ಕಲಕತ್ತಾ ಹಾಗೂ ಮದರಾಸುಗಳಲ್ಲಿ ಸಮ್ಮೇಳನಗಳನ್ನೂ, ವಿಚಾರಸಂಕಿರಣಗಳನ್ನೂ ಸಂಘ ಏರ್ಪಡಿಸಿತ್ತು. ಈ ವಿಚಾರಸಂಕಿರಣ/ಸಮ್ಮೇಳನಗಳಲ್ಲಿ ಸದಸ್ಯ ಬ್ಯಾಂಕುಗಳ 104 ಉನ್ನತ ಅಧಿಕಾರಿಗಳೂ 194 ಇತರ ಅಧಿಕಾರಿಗಳೂ ಭಾಗವಹಿಸಿದ್ದರು. ತಾಂತ್ರಿಕ ತಂಡದ ವರದಿಯನ್ನು ಪರಿಶೀಲಿಸಿದ ಅನಂತರ, ಜಾಲದ ಸದಸ್ಯತ್ವ ಪಡೆಯುವುದರಿಂದ ದೊರೆಯುವ ಲಾಭಗಳ ದೃಷ್ಟಿಯಿಂದ ಈ ಜಾಲಕ್ಕೆ ಸದಸ್ಯತ್ವ ಪಡೆಯಲು ಪರವಾನಗಿ ನೀಡುವಂತೆ ಸಂಘ ಸರಕಾರವನ್ನು ಕೋರಿದೆ. ತನಗೆ ಸದಸ್ಯತ್ವ ನೀಡುವಂತೆ ಜಾಲಕ್ಕೆ ಅರ್ಜಿ ಸಲ್ಲಿಸಲಾಗಿದೆ.

ಕಾರ್ಮಿಕ ಸಂಘಗಳೊಡನೆ ಸಂಧಾನ ನಡೆಸಲೂ ಸರಕಾರದೊಡನೆ ಚರ್ಚಿಸಲೂ ಅನುಕೂಲವಾಗುವಂತೆ ಬ್ಯಾಂಕುಗಳಲ್ಲಿ ಯಾಂತ್ರೀಕರಣ ಮತ್ತು ಗಣಕೀಕರಣದ ಅವಶ್ಯಕತೆಯ ವ್ಯಾಪಕ ಅಧ್ಯಯನ ನಡೆಸಲು "ಟಾಟಾ ಸಲಹಾ ಸೇವೆ" ಯನ್ನು ಸಂಘ ನೇಮಿಸಿಕೊಂಡಿದೆ.

ಇತ್ತೀಚೆಗೆ ಹೆಚ್ಚುತ್ತಿರುವ ಬ್ಯಾಂಕು ದರೋಡೆಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಬ್ಯಾಂಕು ಶಾಖೆಗಳಲ್ಲಿರುವ ಭದ್ರತಾ ವ್ಯವಸ್ಥೆಯ ಅಧ್ಯಯನವನ್ನೂ ಸಂಘ ನಡೆಸಿದೆ: ಇದಕ್ಕಾಗಿ ಅದು ಪ್ರಶ್ನಾವಳಿಯೊಂದನ್ನು ಕಳುಹಿಸಿತ್ತು. ಈ ಅಧ್ಯಯನದಲ್ಲಿ ದೊರೆತ ಮಾಹಿತಿಯನ್ನು ಗಮನದಲ್ಲಿರಿಸಿಕೊಂಡು ಸಂಘ ಪೋಲಿಸು ಹಾಗೂ ಸಂಬಂಧಪಟ್ಟ ಇತರ ಇಲಾಖಾ ಮುಖ್ಯರೊಡನೆ ನಡೆಸಿದ ಚರ್ಚೆಯ ಫಲವಾಗಿ ಬ್ಯಾಂಕುಗಳ ಆಂತರಿಕ ಭದ್ರತಾ ವ್ಯವಸ್ಥೆಯನ್ನು ಬಲಗೊಳಿಸಲು ತೆಗೆದುಕೊಳ್ಳಬಹುದಾದ ಕ್ರಮಗಳನ್ನೊಳಗೊಂಡ ವರದಿಯೊಂದನ್ನು ಸಿದ್ಧಪಡಿಸಿದೆ. ಈ ವರದಿಯ ಫಲವಾಗಿ ಭಾರತ ಸರಕಾರ ಬ್ಯಾಂಕುಗಳ ಆಂತರಿಕ ಭದ್ರತಾ ವ್ಯವಸ್ಥೆಯನ್ನು ಬಲಗೊಳಿಸಲು ಉನ್ನತಾಧಿಕಾರದ ಸಮಿತಿಯನ್ನು ನೇಮಿಸಿದೆ.

ಬ್ಯಾಂಕುಗಳು ತಮ್ಮ ಗ್ರಾಹಕರಿಗೆ ಒದಗಿಸುತ್ತಿರುವ ಹಲವು ಸೇವೆಗಳಿಗೆ ವಿಧಿಸುತ್ತಿರುವ ಶುಲ್ಕದಲ್ಲಿ ಏಕರೂಪತೆಯನ್ನು ತರುವ ಉದ್ದೇಶದಿಂದ ಸಂಘ ನೇಮಿಸಿದ ಸಮಿತಿ ತನ್ನ ಮಧ್ಯಕಾಲೀನ ವರದಿಯನ್ನು ಸಲ್ಲಿಸಿದೆ. ಈ ವರದಿಯಲ್ಲಿ ಸೂಚಿಸಲಾಗಿರುವ ಶುಲ್ಕಕ್ಕೆ ಭಾರತದ ರಿಸರ್ವ್ ಬ್ಯಾಂಕ್ ಹಾಗೂ ಸದಸ್ಯ ಬ್ಯಾಂಕುಗಳು ಒಮ್ಮತ ಸೂಚಿಸಿವೆ. ಆದರೆ ಭಾರತೀಯ ಬ್ಯಾಂಕುಗಳ ಸಂಘಕ್ಕೆ ಏಕಸ್ವಾಮ್ಯ ಹಾಗೂ ನಿರ್ಬಂಧಿತ ವ್ಯಾಪಾರಿ ಆಚರಣಾ ಅಧಿನಿಯಮ ಅನ್ವಯವಾಗುವುದರಿಂದ ಏಕರೂಪ ಸೇವಾಶುಲ್ಕವನ್ನು ಜಾರಿಗೆ ತರುವುದರ ಬಗ್ಗೆ ಮರುಆಲೋಚನೆಯ ಆವಶ್ಯಕತೆ ಕಂಡುಬಂದುದರಿಂದ ವರದಿಯನ್ನು ಸದಸ್ಯ ಬ್ಯಾಂಕುಗಳಿಗೆ ಕಳುಹಿಸಿ, ತಮಗೆ ಸರಿಕಂಡಂತೆ ಕ್ರಮಕೈಗೊಳ್ಳುವ ಸ್ವಾತಂತ್ರ್ಯವನ್ನು ಅವಕ್ಕೆ ನೀಡಲಾಗಿದೆ.

ಬ್ಯಾಂಕಿಂಗ್ ಉದ್ಯಮಕ್ಕೆ ಸಂಬಂಧಿಸಿದಂತೆ ಕಾರ್ಮಿಕ ಕಾನೂನುಗಳ ತಿದ್ದುಪಡಿಯ ಬಗ್ಗೆ ಸಂಘ ವಿಚಾರಸಂಕಿರಣಗಳನ್ನು ಏರ್ಪಡಿಸುತ್ತಿದೆ. ಬ್ಯಾಂಕಿಂಗ್ ಉದ್ಯಮಕ್ಕೆ ಸಂಬಂಧಿಸಿದ ಕಾನೂನಿನ ತಿದ್ದುಪಡಿಗಳನ್ನು ಗುರುತಿಸುವುದು ಮತ್ತು ಇಂಥ ಕಾನೂನಿನ ಚೌಕಟ್ಟಿನಲ್ಲಿ ಬ್ಯಾಂಕುಗಳು ಅನುಭವಿಸುತ್ತಿರುವ ತೊಂದರೆಗಳನ್ನು ಸರಕಾರಕ್ಕೆ ಎತ್ತಿತೋರಿಸಿ ತರಬೇಕಾದ ಬದಲಾವಣೆಗಳ ಆವಶ್ಯಕತೆಯನ್ನು ಮನಗಾಣಿಸುವುದು ಈ ತೆರನ ವಿಚಾರಸಂಕಿರಣಗಳ ಉದ್ದೇಶ. ಬ್ಯಾಂಕಿಂಗ್ ಉದ್ಯಮಕ್ಕೆ ವಿವಿಧ ರಾಜ್ಯಗಳಲ್ಲಿ ಅನ್ವಯವಾಗುವ ಸ್ಥಳೀಯ ಕಾನೂನುಗಳ ಕೆಲವು ಕಲಮುಗಳಿಂದ ವಿನಾಯಿತಿ ಪಡೆಯಲು ಸಹ ಸಂಘದ ಸ್ಥಳೀಯ ಶಾಖೆಗಳು ಪ್ರಯತ್ನಿಸಿ ಯಶಸ್ವಿಯಾಗಿವೆ.

ಸಂಘ ಬ್ಯಾಂಕುಗಳೊಡನೆ ವ್ಯವಹರಿಸುವಾಗ ಎದುರಿಸುತ್ತಿರುವ ಸಮಸ್ಯೆಯ ನಿವಾರಣೋಪಾಯಗಳ ಬಗ್ಗೆ ಬ್ಯಾಂಕ್ ಗ್ರಾಹಕರೊಡನೆಯೂ, ವಾಣಿಜ್ಯ ಹಾಗೂ ಕೈಗಾರಿಕೆಗಳ ಪ್ರಾತಿನಿಧಿಕ ಸಂಸ್ಥೆಗಳೊಡನೆಯೂ ಸಂಘ ಚರ್ಚಿಸುತ್ತದೆ. ಭಾರತೀಯ ರಿಸರ್ವ್ ಬ್ಯಾಂಕ್ ಮತ್ತು ವಿತ್ತಸಚಿವಾಲಯದ ಕೆಲವು ನೀತಿ ನಿರ್ದೇಶನಗಳಿಂದ ತನ್ನ ಸದಸ್ಯರಿಗೆ ಉಂಟಾದ/ಉಂಟಾಗಬಹುದಾದ ತೊಂದರೆಗಳ ಬಗ್ಗೆ ಉದ್ಯಮದ ಪ್ರತಿನಿಧಿಯಾಗಿ ಅದು ತನ್ನ ಅಭಿಪ್ರಾಯವನ್ನು ತಿಳಿಸುತ್ತದೆ. ಬ್ಯಾಂಕಿಂಗ್ ಹಾಗೂ ಉದರಿಗೆ ಸಂಬಂಧಿಸಿದಂತೆ ಇತರ ದೇಶಗಳಲ್ಲಿ ನಡೆಯುವ ಸಮ್ಮೇಳನಗಳಲ್ಲಿ ಭಾರತದ ಬ್ಯಾಂಕಿಂಗ್ ಉದ್ಯಮವನ್ನು ಸಂಘ ಪ್ರತಿನಿಧಿಸುತ್ತದೆ.

ಬ್ಯಾಂಕಿಂಗ್ ಕಾರ್ಮಿಕರಿಗೆ ಸಂಬಂಧಿಸಿದ ನ್ಯಾಯ ಪಂಚಾಯಿತಿಯ ತೀರ್ಪುಗಳು, ವಿವಿಧ ದ್ವಿಪಕ್ಷೀಯ ಒಪ್ಪಂದ

ಗಳು, ಅಧಿಕಾರಿಗಳ ವೇತನ ಭತ್ಯ ಶಿಷ್ಟೀಕರಣದ ಬಗೆಗಿನ ವರದಿಗಳು ಇವನ್ನು ಸಂಘ ಪುಸ್ತಕ ರೂಪದಲ್ಲಿ ಪ್ರಕಟಿಸಿರುವುದಲ್ಲದೆ, ಬ್ಯಾಂಕುಗಳಲ್ಲಿ ಗ್ರಾಹಕಸೇವೆಯ ಸಮಿತಿಯ ವರದಿಯನ್ನೊಳಗೊಂಡಂತೆ ಇತರ ಹಲವು ಉತ್ತಮ ಪುಸ್ತಕಗಳನ್ನು ಪ್ರಕಟಿಸಿದೆ. ಬ್ಯಾಂಕಿಂಗ್ ಉದ್ಯಮದ ಪ್ರಗತಿಯ ವಾರ್ಷಿಕ ವಿಶ್ಲೇಷಣೆಯನ್ನೂ ಭಾರತದ ಬ್ಯಾಂಕ್ ಶಾಖೆಗಳ ಸೂಚಿಯನ್ನೂ ಸಂಘ ಪ್ರಕಟಿಸುತ್ತಿದೆ.

'ಐಬಿಎ ಬುಲೆಟಿನ್' ಎಂಬ ದ್ವಿಭಾಷಾ ಮಾಸಿಕ ಸುದ್ದಿ ಪತ್ರಿಕೆಯನ್ನೂ 'ಐಬಿಎ ನ್ಯೂಸ್ ಲೆಟರ್' ಎಂಬ ಮಾಸಿಕ ಸುದ್ದಿಪತ್ರವನ್ನೂ ಸಂಘ ಪ್ರಕಟಿಸುತ್ತಿದೆ. ಸದಸ್ಯ ಬಾಂಕುಗಳ ಸಿಬ್ಬಂದಿ ಇಲಾಖೆಯ ಉಪಯೋಗಕ್ಕಾಗಿ "ಬ್ಯಾಂಕುಗಳಿಗೆ ಸಂಬಂಧಿಸಿದ ಕಾರ್ಮಿಕ ತೀರ್ಪು"ಗಳನ್ನು ತಿಂಗಳಿಗೊಮ್ಮೆ ಪ್ರಕಟಿಸುತ್ತಿದೆ. ಬ್ಯಾಂಕುಗಳ ಸಿಬ್ಬಂದಿ ಇಲಾಖೆಯವರು ಸಾಮಾನ್ಯವಾಗಿ ಕೇಳುವ ಪ್ರಶ್ನೆಗಳಿಗೆ ಉತ್ತರಿಸುವ ಐಬಿಎ ಆನ್ಸರ್ಸ್ ಎಂಬ ನಿಯತಕಾಲಿಕವೂ ಪ್ರಕಟವಾಗುತ್ತಿದೆ.

ಭಾರತದ ಬ್ಯಾಂಕುಗಳ ಸಂಘದ ಅಧ್ಯಕ್ಷರು 1984ರ ಏಪ್ರಿಲ್ 27ರಂದು ನಡೆದ ವಾರ್ಷಿಕ ಸಭೆಯಲ್ಲಿ ಮಾತನಾಡುತ್ತಾ, ವಿಶ್ವವಿದ್ಯಾಲಯಗಳಲ್ಲಿ ಬ್ಯಾಂಕಿಂಗನ್ನು ವಿಶೇಷವಾಗಿ ಅಭ್ಯಸಿಸುವವರ ಸಂಖ್ಯೆ ಕಡಿಮೆಯಾಗುತ್ತಿರುವುದರ ಬಗ್ಗೆಯೂ, ಬ್ಯಾಂಕಿಂಗ್ ಉದ್ಯಮವನ್ನು ಪ್ರವೇಶಿಸುತ್ತಿರುವವರಲ್ಲಿ ಬ್ಯಾಂಕಿಂಗ್‌ನಲ್ಲಿ ವಿದ್ಯಾಭ್ಯಾಸ ಪಡೆದಿರುವವರ ಸಂಖ್ಯೆ ಕ್ಷೀಣಿಸುತ್ತಿರುವುದರ ಬಗ್ಗೆಯೂ ಕಳಕಳಿ ವ್ಯಕ್ತಪಡಿಸುತ್ತಾ, ಭಾರತದ ವಿಶ್ವವಿದ್ಯಾಲಯಗಳು ಬ್ಯಾಂಕರುಗಳು ಸ್ವೀಕರಿಸುವಂಥ ಅಭ್ಯರ್ಥಿಗಳನ್ನು ರೂಪಿಸುವ ಬ್ಯಾಂಕಿಂಗ್ ಶಿಕ್ಷಣಕ್ರಮವೊಂದನ್ನು ರೂಪಿಸುವುದರ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಈ ನಿಟ್ಟಿನಲ್ಲಿ ಬ್ಯಾಂಕಿಂಗ್ ವಿಶ್ವವಿದ್ಯಾಲಯವೊಂದನ್ನು ಸ್ಥಾಪಿಸುವುದರಿಂದ ಬೆಳವಣಿಗೆಯನ್ನು ಸರಿಯಾದ ದಿಕ್ಕಿನಲ್ಲಿ ಕೇಂದ್ರೀಕರಿಸಲು ಸಹಾಯವಾಗುವುದೆಂದು ತಿಳಿಸಿದ್ದಾರೆ. ಬ್ಯಾಂಕಿಂಗ್ ಉದ್ಯಮಕ್ಕೆ ಸಂಬಂಧಿಸಿದಂತೆ ಇಂದು ಭಾರತದಲ್ಲಿ ಮೂರು ರಾಷ್ಟ್ರೀಯ ಸಂಸ್ಥೆಗಳು ಕೆಲಸ ಮಾಡುತ್ತಿವೆ. ಬ್ಯಾಂಕ್ ವ್ಯವಸ್ಥಾಪನೆಯ ರಾಷ್ಟ್ರೀಯ ಇನ್ಸ್‌ಟಿಟ್ಯೂಟು ಬ್ಯಾಂಕ್ ಸಿಬ್ಬಂದಿಯ ನೇಮಕಾತಿಯಲ್ಲಿ ಹಾಗೂ ಸಂಶೋಧನೆಯಲ್ಲಿ ತೊಡಗಿದ್ದರೆ, ಭಾರತೀಯ ಬ್ಯಾಂಕರುಗಳ ಇನ್ಸ್‌ಟಿಟ್ಯೂಟು ಬ್ಯಾಂಕರುಗಳಿಗೆ ಅಗತ್ಯವಾದ ಶಾಸ್ತ್ರ ಶಿಕ್ಷಣವನ್ನು ನೀಡುವುದರಲ್ಲಿ ತೊಡಗಿದೆ. ಈ ಲೇಖನದಲ್ಲಿ ತಿಳಿಸಿದಂತೆ ಭಾರತದ ಬ್ಯಾಂಕುಗಳ ಸಂಘ ಬ್ಯಾಂಕಿಂಗಿಗೆ ಸಂಬಂಧಿಸಿದ ಎಲ್ಲ ಬಗೆಯ ಚಟುವಟಿಕೆಗಳನ್ನೂ ಹಮ್ಮಿಕೊಂಡಿದೆ. ಈ ಮೂರೂ ಸಂಸ್ಥೆಗಳೂ ಒಂದರೊಡನೊಂದು ಸೇರಿ ಕಾರ್ಯಪ್ರವೃತ್ತವಾಗುವುದರಿಂದ ಹೆಚ್ಚಿನದನ್ನು ಸಾಧಿಸಲು ಸಾಧ್ಯವಾಗುವುದರ ಜೊತೆಗೆ ಸಾಕಷ್ಟು ವೆಚ್ಚದ ಉಳಿತಾಯವೂ ಆದೀತು.

ಭಾರತದಲ್ಲಿಯ ಬ್ಯಾಂಕಿಂಗ್ ಉದ್ಯಮದ ಬಹುಪಾಲು ಸರಕಾರದ ಹಿಡಿತದಲ್ಲಿದೆ. ಹಾಗಾಗಿ ಭಾರತದ ಬ್ಯಾಂಕುಗಳ ಸಂಘ ತೆಗೆದುಕೊಳ್ಳುವ ನಿರ್ಧಾರಗಳು ಬಹುಪಾಲು ಸರಕಾರದ ನೀತಿ ಧೋರಣೆಗಳನ್ನೇ ಅವಲಂಬಿಸಿವೆ. ಹೀಗಾಗಿ ಸಂಘ ವಹಿಸುತ್ತಿರುವ ಪಾತ್ರದ ಬಗ್ಗೆ ಹಲವಾರು ಟೀಕೆಗಳು ಬಂದಿವೆ.

ಆದರೆ ಅದರ ಅಧ್ಯಕ್ಷರ ಮಾತಿನಲ್ಲಿ ಹೇಳುವುದಾದರೆ— "ಭಾರತದ ಬ್ಯಾಂಕುಗಳ ಸಂಘ ಮುಂಬರುವ ದಿನಗಳಲ್ಲಿ ಎಲ್ಲ ಬ್ಯಾಂಕಿಂಗ್ ವ್ಯವಹಾರಕ್ಕೆ ಸಂಬಂಧಿಸಿದಂತೆ ಉದ್ಭವಿಸುವ ಸಮಸ್ಯೆಗಳನ್ನು ಪ್ರತೀಕ್ಷಿಸಿ ನೀತಿನಿರೂಪಕರಿಗೆ ಅಮೂಲ್ಯವಾದ ಸಲಹೆಗಳನ್ನು ನೀಡಲಿದೆ."

---

## ಗ್ರಾಮೀಣ ಬ್ಯಾಂಕುಗಳಿಂದ ಉಳಿತಾಯ ಠೇವಣಿಗಳಿಗೆ ಬಡ್ಡಿ

1-4-1984ರಿಂದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಸಂಘಗಳು ತಮ್ಮಲ್ಲಿಟ್ಟಿರುವ ಉಳಿತಾಯ ಠೇವಣಿಗಳ ಮೇಲೆ ಶೇ. 5 ಬಡ್ಡಿಯನ್ನು ಪಾವತಿ ಮಾಡಲು ಅನುಮತಿ ನೀಡಲಾಗಿದೆ. ಗ್ರಾಮೀಣ ಬ್ಯಾಂಕುಗಳು ತಮ್ಮ ವಿವೇಚನೆಯಂತೆ ಶೇ. ½ ಹೆಚ್ಚು ಬಡ್ಡಿ ಕೊಡಬಹುದು.

# ಚೆಕ್ ಸೌಲಭ್ಯದ ದುರುಪಯೋಗ

ಎಚ್. ಎಸ್. ಕೃಷ್ಣ

ಪ್ರತಿಯೊಂದು ಸೌಲಭ್ಯದ ಹಿಂದೆ ದುರುಪಯೋಗದ ಹಾದಿಯನ್ನು ಕಂಡುಹಿಡಿದುಕೊಳ್ಳುವುದು ಮಾನವನ ಬುದ್ಧಿವಂತಿಕೆಯ ಒಂದು ದುರದೃಷ್ಟಕರ ಬೆಳವಣಿಗೆ ಎನ್ನಬಹುದು. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಚೆಕ್ಕುಗಳ ವಹಿವಾಟು ದಿನೇದಿನೇ ಹೆಚ್ಚುತ್ತಿರುವುದು ತೀರುವೆಮನೆಯಲ್ಲಿ ಬ್ಯಾಂಕುಗಳು ಹಂಚಿಕೊಳ್ಳುವ ಚೆಕ್ಕುಗಳ ಸಂಖ್ಯೆ ಹಾಗೂ ಮೊಬಲಗಿನಿಂದ ಸ್ಪಷ್ಟವಾಗುತ್ತದೆ. ಕೊಟ್ಟ ಚೆಕ್ಕನ್ನು ತೀರುವೆಮನೆಯಲ್ಲಿ ಮತ್ತೆ ಪಡೆಯಬೇಕಾಗುವುದು ಅಪರೂಪವೇನಲ್ಲ. ಚೆಕ್ಕು ವಾಪಸಾಗಲು ಅನೇಕ ಕಾರಣಗಳಿರುತ್ತವೆ. ಆದರೆ ಈ ಲೇಖನದ ವಿಷಯಕ್ಕೆ ಸೀಮಿತವಾಗಿರುವ ಕಾರಣವೆಂದರೆ, ಖಾತೆಯಲ್ಲಿ ಹಣವಿಲ್ಲದಿರುವುದು. ಇಂಥ ಸಂದರ್ಭದಲ್ಲಿ 'ರಚಕನನ್ನು (ಡ್ರಾಯರ್) ವಿಚಾರಿಸಿ' ಎಂಬ ಕಾರಣ ಕೊಟ್ಟು ಚೆಕ್‌ಗಳನ್ನು ವಾಪಸು ಮಾಡಲಾಗುತ್ತದೆ.

ಚೆಕ್‌ನ ಅಡಿಯಲ್ಲಿ ಸಹಿ ಹಾಕುವ ವ್ಯಕ್ತಿಯ ಖಾತೆಯಲ್ಲಿ ಅವನು ಕೊಟ್ಟ ಚೆಕ್ಕಿನ ಪಾವತಿಗೆ ಅಗತ್ಯವಾದಷ್ಟು ಹಣ ಇಲ್ಲ ಎಂಬುದೇ "ರಚಕನನ್ನು ವಿಚಾರಿಸಿ" ಎಂಬ ಕಾರಣದ ಅರ್ಥ. ಈ ರೀತಿ ವಾಪಸ್ಸಾಗುತ್ತಿರುವ ಚೆಕ್ಕುಗಳ ಸಂಖ್ಯೆ ದಿನೇದಿನೇ ಹೆಚ್ಚಾಗುತ್ತಿರುವುದು. ಗ್ರಾಹಕರಲ್ಲಿ ನೈತಿಕ ಜವಾಬ್ದಾರಿ ಕಡಿಮೆಯಾಗುತ್ತಿರುವುದಕ್ಕೆ ಇದೊಂದು ನಿದರ್ಶನ. ಇದಕ್ಕೆ ನಮ್ಮ ದೇಶದಲ್ಲಿ ಕಾನೂನಿನ ಶಿಕ್ಷೆಯಿಲ್ಲದಿರುವುದು ಒಂದು ಮುಖ್ಯ ಕಾರಣವಾಗಿದೆ. ವ್ಯಾಪಾರಿ ಗ್ರಾಹಕರ ಚೆಕ್ಕುಗಳೇ ಅಲ್ಲದೆ ಉಳಿತಾಯ ಖಾತೆಗಳನ್ನು ಹೊಂದಿದವರ ಚೆಕ್ಕುಗಳೂ ವಾಪಸ್ಸಾಗುತ್ತವೆ. ಇದಕ್ಕೆ ಯಾವ ಅಡೆತಡೆಗಳೂ ಇಲ್ಲ. ಪ್ರತಿಯೊಂದು ಬ್ಯಾಂಕೂ ವಾಪಸಾದ ಚೆಕ್ಕಿಗೆ ತನ್ನದೇ ಆದ ಒಂದು ರೀತಿಯ ಶುಲ್ಕವನ್ನು—ಆನುಷಂಗಿಕ ಶುಲ್ಕವನ್ನು—ವಿಧಿಸುತ್ತದೆ. ಆದರೆ ಗ್ರಾಹಕರಿಗೆ ಇದರ ಪರಿವೆ ಇರುವುದಿಲ್ಲ. ಅದೊಂದು ಜುಲ್ಮಾನೆ ಎನಿಸುವುದೇ ಇಲ್ಲ.

ಎಲ್ಲ ಗ್ರಾಹಕರೂ ಉದ್ದೇಶಪೂರ್ವಕವಾಗಿಯೇ ಚೆಕ್ ಸೌಲಭ್ಯದ ದುರುಪಯೋಗ ಪಡೆಯುತ್ತಾರೆಂದು ನನ್ನ ವಾದವಲ್ಲ. ಕೆಲವು ಗ್ರಾಹಕರು ತಮಗೆ ಅರಿವಿಲ್ಲದೆಯೇ ಸೌಲಭ್ಯದ ದುರುಪಯೋಗ ಮಾಡಿಕೊಳ್ಳುತ್ತಾರೆ. ಅದಕ್ಕೆ ಮುಖ್ಯ ಕಾರಣ, ಅನೇಕ ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಾವು ಕೊಡುವ ಉದರಿ ಸೌಲಭ್ಯದ ಬದಲಿಗೆ ಒಟ್ಟಿಗೆ ಹತ್ತಿಪ್ಪತ್ತು ಚೆಕ್‌ಗಳನ್ನು ಮುಂಗಡವಾಗಿ ಪಡೆದು ತಿಂಗಳಿಗೊಮ್ಮೆ ಆಯಾ ಬ್ಯಾಂಕಿಗೆ ಕಳುಹಿಸಿಕೊಡುವುದುಂಟು. ಈ ರೀತಿ ಕೊಟ್ಟ ಚೆಕ್ಕುಗಳು ಯಾವಾಗ ಬರಬಹುದೆಂಬುದನ್ನು ನಿರೀಕ್ಷಿಸದ ಗ್ರಾಹಕ ತನ್ನ ಖಾತೆಯಲ್ಲಿ ಅವುಗಳ ಪಾವತಿಗಾಗಿ ಸಾಕಷ್ಟು ಹಣವಿಟ್ಟಿರುವುದಿಲ್ಲ. ಹೀಗೆ ವಾಪಸ್ಸಾದ ಚೆಕ್ಕಿಗೆ ಪ್ರತಿಯಾಗಿ ಆ ಗ್ರಾಹಕ ತನಗೆ ಉದರಿ ಕೊಟ್ಟ ವ್ಯಕ್ತಿಗೋ ಸಂಸ್ಥೆಗೋ ಸ್ವಲ್ಪ ಹೆಚ್ಚು ಹಣ ಕೊಟ್ಟು ಅಥವಾ ತನ್ನ ತಪ್ಪು ಒಪ್ಪಿಕೊಂಡು, ಕಂತಿನ ಸೌಲಭ್ಯದ ಹೊಂದಾವಣೆ ಮಾಡಿಕೊಳ್ಳುತ್ತಾನೆ. ಈ ಹೊಂದಾವಣೆಗಳು ಬ್ಯಾಂಕು ಚೆಕ್ಕಿನ ದುರುಪಯೋಗಕ್ಕೆ ತಳಹದಿಯಾಗುತ್ತವೆ. ಅನೇಕ ಗ್ರಾಹಕರು ಬ್ಯಾಂಕಿನಿಂದ ಇಪ್ಪತ್ತೈದು ಹಾಳೆಗಳ ಚೆಕ್ ಪುಸ್ತಕವನ್ನು ಪಡೆದ ಒಂದೆರಡು ದಿನಗಳಲ್ಲೇ ಮತ್ತೆ ಇನ್ನೊಂದು ಪುಸ್ತಕಕ್ಕಾಗಿ ಬೇಡಿಕೆ ಪತ್ರ ಸಲ್ಲಿಸುತ್ತಾರೆ. ಬ್ಯಾಂಕಿನವರು ಆ ಬೇಡಿಕೆಯನ್ನು ತಿರಸ್ಕರಿಸಲಾಗುವುದಿಲ್ಲ. ಇಷ್ಟು ಬೇಗ ಇನ್ನೊಂದು ಚೆಕ್ಕು ಪುಸ್ತಕ ಪಡೆಯುತ್ತಿರುವುದರ ಕಾರಣವೇನೆಂದು ಕೇಳಬಹುದು. ಆಗ ಗ್ರಾಹಕ "ನಿಮಗೆ ಗೊತ್ತಲ್ಲ, ಕಂತಿನ ಪ್ರಪಂಚ, ಒಂದು ವರ್ಣ ಟಿ.ವಿ. ತೆಗೆದುಕೊಂಡೆ. ಅದಕ್ಕಾಗಿ ನೀವು ನಿನ್ನೆ ಕೊಟ್ಟ ಪುಸ್ತಕದ ಇಪ್ಪತ್ತೈದು ಚೆಕ್ಕುಗಳನ್ನು ಒಮ್ಮೆಲೇ ಮುಂಗಡವಾಗಿ ಕೊಡಬೇಕಾಯಿತು" ಎಂದು ಹೇಳುತ್ತಾರೆ.

ಗ್ರಾಹಕರು ಕಂತಿನ ಸೌಲಭ್ಯ ಪಡೆಯುವುದಕ್ಕೆ ಬ್ಯಾಂಕಿನವರ ಆಕ್ಷೇಪವೇನಿಲ್ಲ, ಆದರೆ ಚೆಕ್ಕು ಬಂದ ಕಾಲಕ್ಕೆ ಅದರ ಪಾವತಿಗಾಗಿ ಸಾಕಷ್ಟು ಹಣ ಇಡುವ ಜವಾಬ್ದಾರಿ ಇರಬೇಕು. ಕೇಳಿದಾಗ ಹಣ ಪಾವತಿ ಮಾಡಬೇಕಾಗುವುದೆಂಬುದು ಚೆಕ್ಕಿನ ವೈಲಕ್ಷಣ್ಯ. ಆದರೆ ಹಾಗೆ ಕೇಳಿದಾಗ ಹಣ ಸಿಗದಿದ್ದರೆ ಅದಕ್ಕೇನು ಪರಿಹಾರ ಎಂದು ಯೋಚಿಸಬೇಕಾಗುತ್ತದೆ. ಮೋಸ ಮಾಡಿದಾಗ ಅದಕ್ಕೆ ಬೇರೆ ಪರಿಹಾರಗಳು ಕಾನೂನಿನಲ್ಲಿವೆ. ಆದರೆ ಹಣವಿಲ್ಲದೆ ಚೆಕ್ ಕೊಟ್ಟಿದ್ದಕ್ಕೆ ಯಾವ ಶಿಕ್ಷೆಯೂ ಭಾರತದಲ್ಲಿ ಇಲ್ಲ. ಪರದೇಶದಲ್ಲಿ ಒಂದು ವ್ಯಕ್ತಿ ಕೊಟ್ಟ ಚೆಕ್ಕು ವಾಪಸ್ಸಾದರೆ ಸಮಾಜದಲ್ಲಿ ಅವನ ಮರ್ಯಾದೆ ನಷ್ಟವಾಗುತ್ತದೆ. ಇಲ್ಲಿ ದೊಡ್ಡದೊಡ್ಡ ವ್ಯಕ್ತಿಗಳ ಚೆಕ್ಕು ವಾಪಸ್ಸಾದರೂ ಅವರ ಗಣ್ಯತೆಗೆ ಕುಂದಿಲ್ಲ.

ಕಾನೂನಿನ ಪ್ರಕಾರ ಹಣದ ವ್ಯವಸ್ಥೆ ಮಾಡದೆ ಚೆಕ್ಕು ಕೊಟ್ಟ ವರಿಗೆ ಶಿಕ್ಷೆಯಿದ್ದಲ್ಲಿ, ಬ್ಯಾಂಕಿನ ಚೆಕ್‌ಗೆ ಒಂದು ಸ್ಥಾನ, ಗೌರವ ದಕ್ಕುತ್ತದೆ. ಇಲ್ಲದಿದ್ದರೆ ಅದು ಕೇವಲ ಒಂದು ಹಾಳೆಯಾಗುತ್ತದೆ.

ಬ್ರಿಟನ್ನಿನಲ್ಲಿರುವ ಮಾದರಿಯಲ್ಲೇ ನಮ್ಮ ದೇಶದ ಬ್ಯಾಂಕಿಂಗ್ ಕಾನೂನನ್ನು ರೂಪಿಸಿದ್ದರೂ ಆ ದೇಶದಲ್ಲಿ ಅನುಸರಿಸುವ ಕ್ರಮವನ್ನು ನಾವು ಇಲ್ಲಿ ಬಿಟ್ಟಿದ್ದೇವೆ. ಹಣದ ಏರ್ಪಾಡು ಮಾಡದೆ ಚೆಕ್ಕು ಕೊಟ್ಟ ಗ್ರಾಹಕ ಬ್ರಿಟನ್ನಿನಲ್ಲಿ ಶಿಕ್ಷಾರ್ಹ. ಅಮೆರಿಕಾದಲ್ಲಿ ಕೂಡ ಅಂಥವನ ಮೇಲೆ ಕಾನೂನಿನ ಕ್ರಮ ಕೈಗೊಳ್ಳಲು ಕೆಟ್ಟ ಚೆಕ್ಕು ಕಾನೂನು (ಬ್ಯಾಡ್ ಚೆಕ್ ಲಾಸ್) ಜಾರಿಯಲ್ಲಿದೆ. ಅಂಥವರಿಗೆ ಆರು ತಿಂಗಳಿಂದ ಹದಿನೈದು ವರ್ಷಗಳ ವರೆಗೆ ಕಾರಾಗೃಹ ಶಿಕ್ಷೆ ವಿಧಿಸಬಹುದು. ಭಾರತದಲ್ಲೂ ಈ ಬಗ್ಗೆ ಸಾಕಷ್ಟು ಅಧ್ಯಯನವಾಗಿದೆ, ಚರ್ಚೆಗಳು ನಡೆದಿವೆ. ಬ್ಯಾಂಕಿಂಗ್ ಕಾನೂನು ಸಮಿತಿ (ದಿ ಬ್ಯಾಂಕಿಂಗ್ ಲಾಸ್ ಕಮಿಟಿ) ಕೂಡ ದಂಡಸಂಹಿತೆಯಲ್ಲಿ ಅಗತ್ಯವಾದ ಮಾರ್ಪಾಡು ಮಾಡಲು ಸಲಹೆ ನೀಡಿದೆ. ತಪ್ಪಿತಸ್ಥರಿಗೆ ಐದು ವರ್ಷಗಳಿಗೆ ಮೀರದ ಶಿಕ್ಷೆ ವಿಧಿಸಬೇಕೆಂಬುದು ಸಲಹೆ. ಇದರ ವರದಿಯನ್ನು ಪರ್ಯಾಲೋಚಿಸಿ ಆದಷ್ಟು ಬೇಗ ಕಾನೂನಿನ ಕ್ರಮ ಕೈಗೊಂಡಲ್ಲಿ ಚೆಕ್ ಸೌಲಭ್ಯದ ದುರುಪಯೋಗವನ್ನು ಸಂಪೂರ್ಣವಾಗಿ ತೊಡೆದುಹಾಕಬಹುದು.

ದುರುಪಯೋಗದ ಮತ್ತೊಂದು ನಿದರ್ಶನವೆಂದರೆ ಪರ ಊರಿನ ಬ್ಯಾಂಕೊಂದರ ಮೇಲೆ ಚೆಕ್ ಕೊಡುವುದು. ಅದರ ಪಾವತಿಗೆ ಹತ್ತು ಹದಿನೈದು ದಿನ ತಡವಾಗುವುದಾದರೆ ಅಷ್ಟು ಸಮಯ ದೊರಕಿದಂತೆ. ಎರಡು ಊರುಗಳಲ್ಲೂ ಖಾತೆ ಇಟ್ಟುಕೊಂಡು ತಮ್ಮ ಚೆಕ್‌ಗಳನ್ನು ವಟಾಯಿಸುವ ಗ್ರಾಹಕರೂ ಇದ್ದಾರೆ. ಪಾವತಿಗೆ ಚೆಕ್ ಬಂದಾಗ ಅದಕ್ಕೆ ವ್ಯವಸ್ಥೆ ಮಾಡುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಅನೇಕ ಬ್ಯಾಂಕ್‌ಗಳಲ್ಲಿ ತಮ್ಮದೇ ಬ್ಯಾಂಕಿನ ಇತರ ಶಾಖೆಗಳ ಮೇಲಿನ ಚೆಕ್ಕುಗಳಿಗೆ (ಒಂದು ಮಿತಿಯವರೆಗೆ) ಯಾವ ಶುಲ್ಕವನ್ನೂ ವಿಧಿಸುವುದಿಲ್ಲ.

ಕೆಲವು ಗ್ರಾಹಕರು ಉದ್ದೇಶಪೂರ್ವಕವಾಗಿಯೇ ಚೆಕ್ಕನ್ನು ತಪ್ಪಾಗಿ ಬರೆದುಕೊಡುತ್ತಾರೆ. ಚೆಕ್ಕು ವಾಪಸ್ಸಾದರೆ ಪಾವತಿ ತಡವಾಗುವುದೆಂಬುದು ಅವರ ನಿರೀಕ್ಷೆ. ಅಂತಹ ಸಂದರ್ಭದಲ್ಲಿ ಕೆಲವೊಮ್ಮೆ ಬ್ಯಾಂಕು ದೂರವಾಣಿಯ ಮೂಲಕ ಗ್ರಾಹಕರಿಗೆ ತಿಳಿಸಿ ಅದನ್ನು ಸರಿಪಡಿಸಲು ಕೋರುವುದುಂಟು. ಆದರೆ ಅಂಥ ಗ್ರಾಹಕರು ಅದರ ಬಗ್ಗೆ ಅಷ್ಟು ಕಾಳಜಿಯನ್ನೇ ತೋರಿಸುವುದಿಲ್ಲ. "ಚೆಕ್ಕನ್ನು ವಾಪಸ್ಸು ಕಳುಹಿಸಿ. ಅದು ನನಗೆ ಬರಲಿ. ಅನಂತರ ಸರಿಪಡಿಸುತ್ತೇನೆ" ಎನ್ನುತ್ತಾರೆ. ಇನ್ನೂ ಕೆಲವು ಗ್ರಾಹಕರು ತಮ್ಮ ಚೆಕ್ಕುಗಳು ತೀರುವೆಮನೆಯಿಂದ ಬರುವ ವೇಳೆಗೆ ಸರಿಯಾಗಿ ಬ್ಯಾಂಕಿಗೆ ಹೋಗಿ ತಮ್ಮ ಖಾತೆಯ ಮೇಲೆ ತಾವು ಕೊಟ್ಟ ಎಷ್ಟು ಚೆಕ್ಕುಗಳು ಪಾವತಿಗಾಗಿ ಬಂದಿವೆ ಎಂದು ಪರಿಶೀಲಿಸಿ, ಅನಂತರ ಕೆಲವು ಚೆಕ್‌ಗಳ ಪಾವತಿಗೆ ವ್ಯವಸ್ಥೆ ಮಾಡಿ ಇನ್ನು ಕೆಲವು ಚೆಕ್ಕುಗಳನ್ನು ಹಿಂದಿರುಗಿಸಬೇಕೆಂದು ತಾವೇ ಬ್ಯಾಂಕಿಗೆ ಸೂಚನೆ ನೀಡುತ್ತಾರೆ.

ಗ್ರಾಹಕರ ಸೇವೆ ಬ್ಯಾಂಕಿನ ಪರಮಧರ್ಮ. ಆದರೆ ಸೇವೆಯ ದುರುಪಯೋಗ ನಡೆಯುತ್ತಿರುವಾಗ ಬ್ಯಾಂಕುಗಳು ಸರ್ಕಾರದ ಗಮನ ಸೆಳೆದು ಕಾನೂನಿನ ಬಿಗಿ ಕ್ರಮ ಬರುವಂತೆ ಪ್ರಯತ್ನಿಸಬೇಕು.

---

## ಬಡ್ತಿಗೆ ವಸೂಲಿ ಠೆಕ್ಕೆ

ಕೃಷಿ ಕ್ಷೇತ್ರಾಧಿಕಾರಿಗಳಿಗೆ ಮತ್ತು ಗ್ರಾಮೀಣಾಭಿವೃದ್ಧಿ ಅಧಿಕಾರಿಗಳಿಗೆ ಬಡ್ತಿ ಮುಂತಾದುವನ್ನು ನೀಡುವಲ್ಲಿ, ಅವರು ಕೃಷಿ ಬಾಕಿಯನ್ನು ವಸೂಲಿ ಮಾಡುವಲ್ಲಿ ಮಾಡಿದ ಪ್ರಯತ್ನಗಳಿಗೆ ಯುಕ್ತ ಪ್ರಾಮುಖ್ಯವನ್ನು ಕೊಡಬೇಕೆಂದು ಬ್ಯಾಂಕುಗಳಿಗೆ ಭಾರತೀಯ ರಿಸರ್ವ್ ಬ್ಯಾಂಕು ಸಲಹೆ ಮಾಡಿದೆ.

# ಬ್ಯಾಂಕಿಂಗ್ ಸೇವಾ ಆಯೋಗ

**ಶಾಂತರಾಜು**

ಭಾರತ ಸರ್ಕಾರ ಬ್ಯಾಂಕಿಂಗ್ ಸೇವಾ ಆಯೋಗವನ್ನು ರಚಿಸುವ ವಿಧೇಯಕ ಇತ್ತೀಚೆಗೆ ಲೋಕಸಭೆಯ ಅಂಗೀಕಾರ ಪಡೆಯಿತು. ಈ ಆಯೋಗದ ರಚನೆಗೆ ಸುಮಾರು ಒಂದು ದಶಕದಿಂದಲೂ ಪ್ರಯತ್ನ ನಡೆಯುತ್ತಿತ್ತು. ಕೇಂದ್ರ ಆಡಳಿತ ಸೇವಾ ಆಯೋಗ ಮತ್ತು ರಾಜ್ಯ ಆಡಳಿತ ಸೇವಾ ಆಯೋಗಗಳ ಮಾದರಿಯಲ್ಲಿ 1975ರಲ್ಲಿ ಇಂದಿರಾ ಗಾಂಧಿಯವರ ಸರ್ಕಾರ ರಚಿಸಿದ್ದ ಬ್ಯಾಂಕಿಂಗ್ ಸೇವಾ ಆಯೋಗ ಅಧಿನಿಯಮವನ್ನು ಅದು ಜಾರಿಗೆ ಬರುವುದಕ್ಕೆ ಮುಂಚೆಯೇ ಜನತಾ ಸರ್ಕಾರ 1978ರಲ್ಲಿ ನಿರ್ಜೀವಗೊಳಿಸಿತು. ಈಗ ಕೇಂದ್ರ ಸರ್ಕಾರ ಮತ್ತೊಮ್ಮೆ ಈ ಅಧಿನಿಯಮಕ್ಕೆ ಕಾಯಕಲ್ಪ ನೀಡಿದೆ. ಈ ಆಯೋಗದಲ್ಲಿ ಅದರ ಅಧ್ಯಕ್ಷರೂ ಸೇರಿದಂತೆ 9 ಮಂದಿ ಸದಸ್ಯರುಗಳಿರುತ್ತಾರೆ. ಇವರಲ್ಲಿ ಅರ್ಧಕ್ಕಿಂತ ಹೆಚ್ಚು ಸಂಖ್ಯೆಯ ಸದಸ್ಯರನ್ನು ಬ್ಯಾಂಕಿಂಗ್ ಮತ್ತು ಆರ್ಥಿಕ ಸಂಸ್ಥೆಗಳಿಂದ ಆರಿಸಲಾಗುವುದು. ಈ ಆಯೋಗದ ಮುಖ್ಯೋದ್ದೇಶಗಳು ಇವು : 1 ರಾಷ್ಟ್ರೀಕೃತ ಬ್ಯಾಂಕುಗಳಿಗೆ ನೇರವಾಗಿ ಅಧಿಕಾರಿಗಳಾಗಿ ನೇಮಕ ಮಾಡಲು ಅಭ್ಯರ್ಥಿಗಳನ್ನು ಆರಿಸುವುದು ; 2 ಸಹಾಯಕ ಮಹಾವ್ಯವಸ್ಥಾಪಕರ ದರ್ಜೆಯ ಅಥವಾ ಅದಕ್ಕಿಂತ ಮೇಲ್ಪಟ್ಟ ದರ್ಜೆಯ ಪ್ರತಿಯೊಂದು ಹುದ್ದೆಗೆ ನೇಮಕವಾಗಬೇಕಾದ ಅಥವಾ ಖಾಯಂ ಮಾಡಬೇಕಾದ ಅಧಿಕಾರಿಗಳನ್ನು ಆರಿಸುವುದು ಮತ್ತು 3 ಸರ್ಕಾರ ನಿರ್ದೇಶಿಸುವ ಇತರ ಯಾವುದೇ ಹುದ್ದೆಗಳ ನೇಮಕಕ್ಕೆ ಅಭ್ಯರ್ಥಿಗಳನ್ನು ಆರಿಸುವುದು. ಇವೇ ಕಾರ್ಯಗಳಲ್ಲದೆ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳಿಗೆ ಮೀಸಲಾತಿಯ ಹುದ್ದೆಗಳ ಭರ್ತಿ ಮಾಡುವ ಕಾರ್ಯ ಮತ್ತು ಮೀಸಲಾತಿಯ ಶೇಕಡವಾರು ಬಗ್ಗೆ ಹತೋಟಿ, ಇವೇ ಮೊದಲಾದ ಕಾರ್ಯಗಳನ್ನೂ ಸರ್ಕಾರ ಈ ಆಯೋಗಕ್ಕೆ ವಹಿಸಿಕೊಡುವ ಅಧಿಕಾರ ಹೊಂದಿರುತ್ತದೆ. ಪ್ರತಿಯೊಂದು ಬ್ಯಾಂಕೂ ತನ್ನಲ್ಲಿ ಖಾಲಿಯಿರುವ ಅಥವಾ ಉದ್ಭವಿಸುವ ಹುದ್ದೆಗಳ ಶೇಕಡ 25ರಷ್ಟನ್ನು ಈ ಆಯೋಗಕ್ಕೆ ತಿಳಿಸುವ ಜವಾಬ್ದಾರಿಯಿದೆ. ಈ ಹುದ್ದೆಗಳನ್ನು ಬ್ಯಾಂಕು ಈ ಆಯೋಗದ ಮೂಲಕವೇ ಭರ್ತಿ ಮಾಡಬೇಕು. ಆದರೆ ಮಾನವೀಯ ಅನುಕಂಪದ ದೃಷ್ಟಿಯಿಂದ ನೇಮಿಸಲ್ಪಡುವ ಹುದ್ದೆಗಳಿಗೆ ವಿನಾಯತಿ ನೀಡಲಾಗಿದೆ. ರಾಷ್ಟ್ರೀಕೃತ ಬ್ಯಾಂಕುಗಳಿಂದ ಸ್ವೀಕೃತವಾದ ಅಂಕಿಅಂಶಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆರಿಸಿ ತನ್ನ ಶಿಫಾರಸಿನೊಡನೆ ಪ್ರತಿಯೊಂದು ಬ್ಯಾಂಕಿಗೂ ಅಭ್ಯರ್ಥಿಗಳ ಪಟ್ಟಿಯನ್ನು ಕಳುಹಿಸಿಕೊಡುವ ಹೊಣೆ ಆಯೋಗದ್ದಾಗಿರುತ್ತದೆ. ಪ್ರತಿಯೊಂದು ಹುದ್ದೆಯನ್ನೂ ಆಯೋಗ ಶಿಫಾರಸು ಮಾಡಿದ ಪಟ್ಟಿಯಿಂದಲೇ ತುಂಬುವ ಜವಾಬ್ದಾರಿ ಆಯಾ ಬ್ಯಾಂಕುಗಳದಾಗಿರುತ್ತದೆ. ರಾಷ್ಟ್ರದಲ್ಲಿರುವ 28 ರಾಷ್ಟ್ರೀಕೃತ ಬ್ಯಾಂಕು ಅಧಿಕಾರಿಗಳ ನೇರ ನೇಮಕಾತಿಯ ಅಧಿಕಾರ ಈ ಆಯೋಗದ್ದಾಗಿರುತ್ತದೆ. ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿರುವ 4A ಶ್ರೇಣಿಯನ್ನು (Scale IV A) ಏನು ಮಾಡುತ್ತಾರೋ ನೋಡಬೇಕಾಗಿದೆ. ಅನ್ಯ ಬ್ಯಾಂಕುಗಳಲ್ಲಿ ಈ ಶ್ರೇಣಿ ಜಾರಿಯಲ್ಲಿಲ್ಲ. 4ರ ಶ್ರೇಣಿಯ ಮೇಲ್ಪಟ್ಟ ಹುದ್ದೆಗಳಿಗೆ ಆರಿಸುವ ಅಥವಾ ಬಡ್ತಿ ನೀಡುವ ಅಧಿಕಾರ ಸಹ ಈ ಆಯೋಗದ ಕಾರ್ಯವ್ಯಾಪ್ತಿಗೆ ಒಳಪಟ್ಟಿರುವುದರಿಂದ ಇತರ ಬ್ಯಾಂಕುಗಳ 4ನೆಯ ಶ್ರೇಣಿಯ ಅಧಿಕಾರಿಗಳು ನೇರವಾಗಿ 5ನೆಯ ಶ್ರೇಣಿಗೆ ಬಡ್ತಿ ಹೊಂದುವುದರಿಂದ ಭಾರತೀಯ ಸ್ಟೇಟ್ ಬ್ಯಾಂಕಿನ 4A ಶ್ರೇಣಿಯ ಅಧಿಕಾರಿಗಳು ಸೇವಾಜ್ಯೇಷ್ಠರಾದರೂ ಈ ಅಧಿಕಾರಿಗಳ ಕೈಕೆಳಗೆ ಕೆಲಸ ಮಾಡುವ ಅಸಂಗತವಾದ ಪರಿಸ್ಥಿತಿಯುಂಟಾಗಬಹುದು. ಈ ಪರಿಸ್ಥಿತಿಯನ್ನು ನಿವಾರಿಸಲು ಮತ್ತು 4A ಶ್ರೇಣಿಯನ್ನು ತೆಗೆಯಲು ಯಾವ ರೀತಿಯ ಯೋಜನೆ ಹಾಕಲಾಗಿದೆಯೆಂಬ ಬಗ್ಗೆ ಯಾವ ಪ್ರತಿಕ್ರಿಯೆಯೂ ಬಂದಿರುವುದಿಲ್ಲ.

ಆಯೋಗದ ಪ್ರತಿಯೊಬ್ಬ ಸದಸ್ಯರೂ ಭಾರತೀಯ ದಂಡಸಂಹಿತೆಯ 21ನೆಯ ಪ್ರಕರಣದ ಅನ್ವಯ ಸಾರ್ವಜನಿಕ ಸೇವಕರೆಂದು ಪರಿಗಣಿಸಲ್ಪಡುತ್ತಾರೆ.

# ಸಾಮಾಜಿಕ ಪಿಡುಗಿನ ನಿವಾರಣೆ ಒಂದು ಸಾಮೂಹಿಕ ಹೊಣೆ

'ದೇವದಾಸಿ', 'ಬಾಲ್ಯವಿವಾಹ' ಹಾಗೂ 'ವರದಕ್ಷಿಣೆ' ಇವು ನಮ್ಮ ಸಮಾಜಕ್ಕೆ ಅಟ್ಟಿಕೊಂಡು ಬಂದ ಭಯಂಕರ ಪಿಡುಗುಗಳು. ಇವುಗಳನ್ನು ತೊಡೆದುಹಾಕುವುದು ಇಡೀ ಸಮಾಜದ ಹೊಣೆ.

ಹೆಣ್ಣುಕುಲಕ್ಕೆ ಕಳಂಕಪ್ರಾಯವಾದ ದೇವದಾಸಿ ಪದ್ಧತಿಯನ್ನು ಪ್ರೋತ್ಸಾಹಿಸುವ ತಂದೆ-ತಾಯಿ, ಪಾಲಕರು, ಸಂಬಂಧೀಕರು ಅಥವಾ ಅದನ್ನು ಅನುಸರಿಸುವ, ಅನುಮತಿಸುವ ಇಲ್ಲವೇ ಒತ್ತಾಯಿಸುವವರು ಉಗ್ರಶಿಕ್ಷೆ ಮತ್ತು ಜುಲ್ಮಾನೆಗೆ ಗುರಿಯಾಗುತ್ತಾರೆ.

ಹೆಣ್ಣು ಹೆತ್ತವರ ಬಾಳಿನ ಭೀಕರ ಪ್ರಸಂಗವೆನಿಸಿದ ವರದಕ್ಷಿಣೆ ಕೇಳುವುದು, ಕೊಡುವುದು ಅಥವಾ ತೆಗೆದುಕೊಳ್ಳುವುದು ಕಾನೂನುಬಾಹಿರ. ಈ ಅಪರಾಧವೆಸಗಿದವರು ಕಾನೂನಿನ ಪ್ರಕಾರ ಆರು ತಿಂಗಳ ಜೈಲು ಮತ್ತು ಐದು ಸಾವಿರ ರೂಪಾಯಿಗಳ ಜುಲ್ಮಾನೆಗೆ ಒಳಗಾಗುವರು.

ಬಾಳ ಬೆಳಗಿನಲ್ಲಿಯೇ ಬದುಕಿನ ನೊಗ ಹೇರುವ ಬಾಲ್ಯವಿವಾಹ ಮತ್ತೊಂದು ಸಾಮಾಜಿಕ ಸಮಸ್ಯೆ. 21 ವರ್ಷ ವಯಸ್ಸಿನೊಳಗಿನ ಯುವಕರು ಅಪ್ರಾಪ್ತವಯಸ್ಸಿನ ಹೆಣ್ಣನ್ನು ಮದುವೆಯಾದರೆ ಒಂದು ಸಾವಿರ ರೂಪಾಯಿ ದಂಡ ಮತ್ತು 15 ದಿನ ಜೈಲುವಾಸ. 21 ವರ್ಷ ವಯಸ್ಸು ಮೇಲ್ಪಟ್ಟ ಯುವಕರು ಅಪ್ರಾಪ್ತವಯಸ್ಸಿನ ಹೆಣ್ಣನ್ನು ಮದುವೆಯಾದಲ್ಲಿ ಮೂರು ತಿಂಗಳ ಜೈಲುವಾಸ ಮತ್ತು ನಿಗದಿಪಡಿಸಿದ ದಂಡವನ್ನು ತೆರಬೇಕಾಗುತ್ತದೆ.

ಅಪ್ರಾಪ್ತವಯಸ್ಸಿನ ಮಕ್ಕಳನ್ನು ಮದುವೆ ಮಾಡುವುದು, ಮದುವೆಗೆ ಪ್ರೋತ್ಸಾಹಿಸುವುದು ಅಥವಾ ಪ್ರೇರೇಪಿಸಿದಲ್ಲಿ ಅಂತಹ ತಂದೆ ತಾಯಿಯರು, ಪೋಷಕರು ಅಥವಾ ಬಂಧುಗಳು ಮೂರು ತಿಂಗಳ ಜೈಲುವಾಸ ಮತ್ತು ನಿಗದಿಪಡಿಸಿದ ದಂಡ ತೆರಬೇಕಾಗುತ್ತದೆ.

ಇಂತಹ ಪ್ರಸಂಗಗಳು ಗಮನಕ್ಕೆ ಬಂದಲ್ಲಿ ಹತ್ತಿರದ ಪೋಲೀಸ್ ಠಾಣೆಗೆ ತಿಳಿಸಿ. ಹೆಚ್ಚಿನ ಮಾಹಿತಿಗೆ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, 3ನೇ ಮಹಡಿ, ಮಲ್ಟಿ ಸ್ಟೋರೀಡ್ ಬಿಲ್ಡಿಂಗ್, ಡಾ. ಬಿ. ಆರ್. ಅಂಬೇಡ್ಕರ್ ಬೀದಿ, ಬೆಂಗಳೂರು–1, ಅಥವಾ ಜಿಲ್ಲಾ ಕೇಂದ್ರಗಳಲ್ಲಿರುವ ಸಮಾಜ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರನ್ನು ಸಂಪರ್ಕಿಸಬೇಕು.

ಪ್ರಕಟಣೆ:

ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು

ನ್ಯಾಯಾಲಯದಲ್ಲಿ

# ಬ್ಯಾಂಕುಗಳ ಸಾಲಗಳಿಗೂ ದುಬಾರ ಬಡ್ಡಿ ಕಾನೂನಿನ ಅನ್ವಯ

ಅನುವಾದ :
**ಅತ್ತೂರು ಚೈಯಬ್ಬ, ಮುರಲೀಧರ, ಚಂದ್ರಶೇಖರ್, ಬಿ. ಎಸ್. ಶ್ರೀನಿವಾಸ್**

ಡಿ. ಎಸ್. ಗೌಡ (ಮೇಲ್ಮನವಿದಾರ)
ವಿರುದ್ಧ
ಕಾರ್ಪೋರೇಷನ್ ಬ್ಯಾಂಕ್ (ಪ್ರತಿ ಮೇಲ್ಮನವಿದಾರ)

**ವಾಸ್ತವಾಂಶ**

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ತಮಗೆ ದತ್ತವಾದ ನಿವೇಶನ ಒಂದರಲ್ಲಿ ಶ್ರೀ ಡಿ. ಎಸ್. ಗೌಡರವರು ವಾಸಯೋಗ್ಯ ಫ್ಲಾಟುಗಳನ್ನು ಕಟ್ಟಲು ಬಯಸಿದ್ದರು. ಈಗ 'ಕಾರ್ಪೋರೇಶನ್ ಬ್ಯಾಂಕು' ಎಂದು ಕರೆಯಲ್ಪಡುವ ದಿ ಕಾರ್ಪೋರೇಷನ್ ಬ್ಯಾಂಕ್ ನಿಯಮಿತ ಸಂಸ್ಥೆ ಈ ನಿರ್ಮಾಣ ಕಾರ್ಯಕ್ಕಾಗಿ ಶ್ರೀ ಗೌಡರಿಗೆ ಮಿಾರೆಳೆತ ಸೌಲಭ್ಯ ನೀಡಿತ್ತು. ಅವರಿಗೆ ಕಟ್ಟಡ ಪೂರೈಸಲೂ ಆಗಲಿಲ್ಲ, ಸಾಲ ಮರುಪಾವತಿ ಮಾಡಲೂ ಆಗಲಿಲ್ಲ. ಆದುದರಿಂದ ಮಂಜೂರಾದ ನಕಾಶೆಯಂತೆ ಕಟ್ಟಡ ಕೆಲಸದ ಉಸ್ತುವಾರಿ ಮಾಡಲು ಮತ್ತು/ಅಥವಾ ಕಟ್ಟಡ ಕಟ್ಟಲು ಹಾಗೂ ಬಾಡಿಗೆ ಕೊಟ್ಟು ಬಾಡಿಗೆ ವಸೂಲು ಮಾಡಲು, ಬ್ಯಾಂಕು ವ್ಯವಸ್ಥಾಪಕರಿಗೆ ಅಧಿಕಾರ ನೀಡಿ ರದ್ದುಪಡಿಸಲಾಗದ ಮೊಕ್ತ್ಯಾರುನಾಮೆ ಬರೆದುಕೊಟ್ಟರು. ಆದಾಗ್ಯೂ ಸಾಲ ತೀರಿಸಲಾಗಲಿಲ್ಲ ಮತ್ತು ಚಕ್ರಬಡ್ಡಿ, ದಂಡಬಡ್ಡಿ ಹಾಗೂ ಸೇವಾಶುಲ್ಕಗಳು ಸೇರಿ ಅದು ಏರುತ್ತಾ ಹೋಯಿತು. 1975ರಲ್ಲಿ ಸಾಲದ ಬಾಕಿ ಮತ್ತು ಬಡ್ಡಿಯೂ ಸೇರಿದ ಮೊಬಲಗು ರೂ. 4,71,000/–ಆಗಿತ್ತು. ಸಾಮ್ಯ ಅಡಮಾನ ಪತ್ರದಂತೆ ಐದು ಲಕ್ಷ ರೂಪಾಯಿಗಳ ಒಟ್ಟು ಹೊಣೆಗೆ ಬ್ಯಾಂಕಿನ ಹೆಸರಿಗೆ ಸದರಿ ನಿವೇಶನದ ಹಕ್ಕು ಪತ್ರಗಳ ಠೇವಣಿ ಇಡುವುದರ ಮೂಲಕ ಅಡಮಾನವನ್ನು ಅಕ್ಟೋಬರ್ 10, 1975ರಂದು ಬ್ಯಾಂಕು ಪಡೆದುಕೊಂಡಿತು.

ಸದರಿ ಪತ್ರದ ಸಾರಭೂತ ಷರತ್ತುಗಳು ಇವು :

"ಸಾಲಿಯಾನ ಶೇಕಡ 16½ ದರದ ಬಡ್ಡಿಯೊಂದಿಗೆ ವಿಧಿಸಬಹುದಾದ ಯಾವುದೇ ಬಡ್ಡಿ ದರಕ್ಕೆ ಒಳಪಟ್ಟು ಮೇಲೆ ಹೇಳಿದ ಐದು ಲಕ್ಷ ರೂಪಾಯಿಗಳ ಅಡಮಾನ ಸಾಲವನ್ನು ಎರಡು ವರ್ಷಗಳ ಅವಧಿಯ ಒಳಗೆ ಅಡಮಾನದಾರ ಮರುಪಾವತಿ ಮಾಡುವುದಕ್ಕೆ ಈ ಮೂಲಕ ಒಡಂಬಡುತ್ತಾರೆ. ಅಡಮಾನ ಸಾಲದ ಮೊಬಲಗಿನ ಮೇಲಿನ ಬಡ್ಡಿಯನ್ನು ತಪ್ಪದೆ ಪ್ರತಿ ಕ್ಯಾಲೆಂಡರ್ ತಿಂಗಳ ಕೊನೆಯಲ್ಲಿ ಪಾವತಿ ಮಾಡಲೂ, ತಪ್ಪಿದಲ್ಲಿ ಸುಸ್ತಿಬಡ್ಡಿ ವಿಧಿಸಬಹುದೆಂದೂ ಅಡಮಾನದಾರ ಒಪ್ಪುತ್ತಾರೆ." ನವೆಂಬರ್ 7, 1975ರಂದು ಶ್ರೀ ಗೌಡರು ಸಾಲಿಯಾನ ಶೇ. 16½ ಯಂತೆ ತ್ರೈಮಾಸಿಕ ಲೆಕ್ಕಾಚಾರದ ಬಡ್ಡಿಯೊಂದಿಗೆ ಐದು ಲಕ್ಷ ರೂಪಾಯಿಯನ್ನು ಪಾವತಿ ಮಾಡಲು ಒಪ್ಪಿ ವಚನಪತ್ರವೊಂದನ್ನು ಆನುಷಂಗಿಕ ಪ್ರತಿಭೂತಿಯಾಗಿ ಮತ್ತೊಮ್ಮೆ ಬರೆದುಕೊಟ್ಟರು. ಮಾರ್ಚ್ 1, 1978ರಂದು ಇದ್ದಂತೆ ದಂಡ ಬಡ್ಡಿ ಮತ್ತು ಸೇವಾವೆಚ್ಚಗಳ ಸಮೇತ ಶ್ರೀ ಗೌಡರು ಕೊಡಬೇಕಾಗಿದ್ದ ಬಾಕಿ ರೂ. 7,56,934. 17. ವೆಚ್ಚಗಳು ಮತ್ತು ಭಾವೀ ಬಡ್ಡಿಯೊಂದಿಗೆ ಸದರಿ ಮೊಬಲಗನ್ನು

ವಸೂಲು ಮಾಡಲು ಹಾಗೂ ಸಿವಿಲ್ ಪ್ರಕ್ರಿಯಾಸಂಹಿತೆಯ 34ನೆಯ ಆದೇಶದ ವಿಧಿಗಳಿಗೆ ಅನುಸಾರವಾಗಿ ಅಡಮಾನ ಸ್ವತ್ತಿನ ವಿಕ್ರಯ ಮಾಡಲು ಮಾರ್ಚ್ 2, 1978ರಂದು ಬ್ಯಾಂಕು ದಾವಾ ಹೂಡಿತು.

ಪ್ರತಿವಾದಿ ಶ್ರೀ ಡಿ. ಎಸ್. ಗೌಡರು ಸಾಮ್ಯ ಅಡಮಾನ ಮತ್ತು ವಚನಪತ್ರವನ್ನು ಬರೆದುಕೊಟ್ಟಿದ್ದನ್ನು ಒಪ್ಪಿಕೊಂಡರಾದರೂ ದಾವೆಯನ್ನು ವಿರೋಧಿಸುತ್ತಾ ಮಂಡಿಸಿದ ತಮ್ಮ ಇತರ ವಾದಗಳೊಂದಿಗೆ ಹೀಗೆ ಹೇಳಿದರು : ವಚನಪತ್ರವನ್ನು ಅನುಷಂಗಿಕ ಪ್ರತಿಭೂತಿಯಾಗಿ ಕೊಡಲಾಗಿತ್ತು. ಹಾಗೂ ಅದರಲ್ಲಿ ವಿಧಿಸಲಾದ ತ್ರೈಮಾಸಿಕ ಬಡ್ಡಿ ಲೆಕ್ಕಾಚಾರವು ಅವರಿಗೆ ನೀಡಿದ ಸಾಲದ ಷರತ್ತುಗಳಲ್ಲೊಂದಾಗಿರಲಿಲ್ಲ.

ಅಡಮಾನದಲ್ಲಿ ವಾಸ್ತವವಾಗಿ ಪಡೆದ ಸಾಲದ ಮೊಬಲಗು ನಾಲ್ಕು ಲಕ್ಷ ರೂ.ಗಳಷ್ಟು ಮಾತ್ರ. ಆದರೆ ಹಿಂದೆ ನೀಡಲಾದ ನಾಲ್ಕು ಲಕ್ಷ ರೂ. ಮುಂಗಡದ ಮೇಲಿನ ಬಡ್ಡಿಯನ್ನು ಒಳಗೊಂಡಂತೆ ಐದು ಲಕ್ಷ ರೂ. ಗಳಿಗೆ ಬ್ಯಾಂಕು ಪತ್ರವನ್ನು ಬರೆಸಿಕೊಂಡಿತು. ಚಕ್ರಬಡ್ಡಿ ಅಥವಾ ದಂಡ ಬಡ್ಡಿಯೂ ಸಾಲ ವಹಿವಾಟಿನ ಷರತ್ತುಗಳ ಪೈಕಿ ಒಂದು ಆಗಿರಲಿಲ್ಲವಾದ್ದರಿಂದ ಪಾವತಿ ಮಾಡಲು ಪ್ರತಿವಾದಿ ಹೊಣೆಯಲ್ಲ. ಯಾವ ದೃಷ್ಟಿಯಿಂದ ನೋಡಿದರೂ ವಿಧಿಸಲಾದ ಬಡ್ಡಿ ದುಬಾರಿ ಮತ್ತು ವಹಿವಾಟು ಬಹಳ ಅನ್ಯಾಯದ್ದು. ಆದ್ದರಿಂದ ಮೈಸೂರು ದುಬಾರಿ ಬಡ್ಡಿ ಸಾಲಗಳ ಅಧಿನಿಯಮದ ಉಪಬಂಧಗಳಡಿಯಲ್ಲಿ ಪ್ರತಿವಾದಿಯು ಪರಿಹಾರಕ್ಕೆ ಹಕ್ಕುಳ್ಳವರು. ಶ್ರೀ ಗೌಡರಿಗೆ ಸಾಲವು ಮೂಲತಃ ರೂ. 4,22,000/- ಕೊಡಲಾಗಿತ್ತು. ಮತ್ತು ಆ ಮೊಬಲಗಿನ ಮೇಲೆ ಕೂಡಿ ಬಂದ ಬಡ್ಡಿ ರೂ. 78,000/- ಎಂದು ಪುರಾವೆ ಆಧಾರದ ಮೇಲೆ ಕೆಳ ನ್ಯಾಯಾಲಯ ನಿರ್ಣಯಿಸಿತು.

ಅವರು ತ್ರೈಮಾಸಿಕ ಲೆಕ್ಕಾಚಾರದ ಬಡ್ಡಿ ಪಾವತಿ ಮಾಡಲು ಹೊಣೆಯಲ್ಲವೆಂದು ಸಾಬೀತುಪಡಿಸಲಿಲ್ಲವಾದ್ದರಿಂದ ದಾವೆಯಲ್ಲಿ ಕೇಳಿದಂತೆ ಬ್ಯಾಂಕು ಬಡ್ಡಿ ವಿಧಿಸಿದ್ದು ನ್ಯಾಯಸಮ್ಮತ. 1923ರ ಮೈಸೂರು ದುಬಾರಿ ಬಡ್ಡಿ ಸಾಲಗಳ ಅಧಿನಿಯಮಗಳಡಿಯಲ್ಲಿ ಕೇಳಲಾದ ಪರಿಹಾರದ ಪ್ರಶ್ನೆಯ ಬಗ್ಗೆ ಆತನ ಸಾಲದ ವಹಿವಾಟು ಅನ್ಯಾಯದ್ದಾಗಿತ್ತೆಂದಾಗಲಿ ವಿಧಿಸಿದ ಬಡ್ಡಿ ಅತಿಯಾದ್ದು ಅಥವಾ ದುಬಾರಿಯಾಗಿತ್ತೆಂದಾಗಲಿ ಸ್ಥಾಪಿಸಿಲ್ಲ ಎಂದು ನಿರ್ಣಯಿಸಲಾಯಿತು. ಈ ನಿರ್ಣಯಗಳ ಆಧಾರದ ಮೇಲೆ ವೆಚ್ಚ ಹಾಗೂ ಸಾಲಿಯಾನ ಶೇ. 16½ ದರದಲ್ಲಿ ಭಾವಿ ಬಡ್ಡಿಯೊಂದಿಗೆ ಕೇಳಲಾದ ದಾವೆಯ ಮೊಬಲಗನ್ನು ಆರು ತಿಂಗಳುಗಳ ಒಳಗಾಗಿ ಪಾವತಿ ಮಾಡಬೇಕೆಂದು ಪೂರ್ವ ಭಾವಿ ಡಿಕ್ರಿಯನ್ನು ನೀಡಲಾಯಿತು. ಇದರಂತೆ ಪಾವತಿ ಮಾಡಲು ತಪ್ಪಿದಲ್ಲಿ ಅಡಮಾನ ಮಾಡಲಾದ ಸ್ವತ್ತನ್ನು ವಿಕ್ರಯಿಸಿ ಡಿಕ್ರಿಯ ಮೊಬಲಗನ್ನು ಪಡೆಯಲು ಬ್ಯಾಂಕಿಗೆ ಅಧಿಕಾರ ನೀಡಲಾಯಿತು. ಆದ್ದರಿಂದ ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಶ್ರೀ ಗೌಡರು ಮೇಲ್ಮನವಿ ಸಲ್ಲಿಸಿದರು. ಕಕ್ಷಿಗಳ ವಾದಗಳ ಆಧಾರದ ಮೇಲೆ ಈ ಮುಂದಿನ ಎರಡು ಕಾನೂನಿನ ಅಂಶಗಳನ್ನು ನ್ಯಾಯಾಲಯ ನಿರ್ಣಯಿಸಿತು.

**ಕಾನೂನಿನ ಅಂಶಗಳು**

1 ಮಾಸಿಕ ಲೆಕ್ಕಾಚಾರದ ಮೇಲೆ ಶೇ. 16½ ದರದ ಬಡ್ಡಿಯ ಪಾವತಿಗೆ ಉಪಬಂಧಿಸಿರುವ ಅಡಮಾನ ಪತ್ರದ ಷರತ್ತುಗಳು ಭಾರತೀಯ ರಿಸರ್ವ್ ಬ್ಯಾಂಕಿನ ಪರಿನಿಯತ ನಿರ್ದೇಶಗಳ ಅಡಿಯಲ್ಲಿ ಸಿಂಧುವೆ ಅಥವಾ ಅವಕ್ಕೆ ಬ್ಯಾಂಕಿನ ಆಚರಣೆಯ ಬೆಂಬಲವಿದೆಯೆ ?

2 ದಂಡಬಡ್ಡಿ, ಸೇವಾಶುಲ್ಕಗಳೂ ಸೇರಿದಂತೆ ಬ್ಯಾಂಕ್ ವಿಧಿಸಿದ ಬಡ್ಡಿ ಅತಿಯೆ ಮತ್ತು ಈ ಸಾಲ ವ್ಯವಹಾರದ ತೀವ್ರತೆಯನ್ನು ಶಮನಗೊಳಿಸಲು 1923ರ ಮೈಸೂರು ದುಬಾರಿ ಬಡ್ಡಿ ಸಾಲಗಳ ಅಧಿನಿಯಮದ ಉಪಬಂಧದ ನೆರವನ್ನೂ ನ್ಯಾಯಾಲಯ ಪಡೆಯಬಹುದೆ ?

**ನ್ಯಾಯಾಲಯದ ತೀರ್ಪು**

ರಿಸರ್ವ್ ಬ್ಯಾಂಕ್ ನೀಡಿದ ನಿರ್ದೇಶಗಳಿಗೆ ಪರಿನಿಯಮದ ಬಲವಿದೆ. ವಿವಿಧ ಜನವರ್ಗಗಳಿಗೆ ಧನಪೋಷಣೆ ಮಾಡುವಲ್ಲಿ ಅಥವಾ ಮುಂಗಡ ನೀಡುವಲ್ಲಿ ಕಾರ್ಯಾಚರಣೆಗಳ ವಿಧಾನನೀತಿ, ಪ್ರಕ್ರಿಯೆ ಮತ್ತು ಬಡ್ಡಿಯ ದರ ಇವುಗಳನ್ನು ಕುರಿತಂತೆ ಅವು ಮಾರ್ಗದರ್ಶಿ ಸೂತ್ರಗಳನ್ನು ವಿಧಿಸುತ್ತವೆ. ಆದರೆ ವ್ಯವಹಾರದ ಯಥಾಕ್ರಮದಲ್ಲಿ ಬ್ಯಾಂಕಿಂಗ್ ಸಂಸ್ಥೆಗಳು ನಡೆಸುವ ಸಾಲ ವಹಿವಾಟುಗಳು ಪರಿನಿಯತ ಒಪ್ಪಂದಗಳಲ್ಲ. ರಿಸರ್ವ್ ಬ್ಯಾಂಕಿನ ನಾನಾ ನಿರ್ದೇಶಗಳು ಬ್ಯಾಂಕಿಂಗ್ ಆಚರಣೆ ಮತ್ತು ಕಾನೂನಿನ ಕುರಿತ ತಜ್ಞರ ಅಭಿಪ್ರಾಯಗಳು, ಇವನ್ನು ಪರಿಶೀಲಿಸಿ ಬ್ಯಾಂಕುಗಳಿಗೆ ರಿಸರ್ವ್ ಬ್ಯಾಂಕ್ ನೀಡುವ ಸಾಲದ ಬಡ್ಡಿಯ ದರವನ್ನು ಠೇವಣಿಗಳ ಮೇಲೆ ಪಾವತಿ ಮಾಡಬೇಕಾಗುವ ಬಡ್ಡಿದರವನ್ನು ಹೋಲಿಸಿ ಈ ಪ್ರಕರಣದ ವಾಸ್ತವಾಂಶ ಹಾಗೂ ಸನ್ನಿವೇಶಗಳನ್ನು ಪರಿಶೀಲಿಸಿ ನ್ಯಾಯಾಲಯ ಶೇ. 16½ಯ ಬಡ್ಡಿಯ ದರ ಅತಿ ಎಂದು ತೀರ್ಮಾನಿಸಿತು. ಆಧಾರದ ಸಾಲದ ಮೇಲೆ ಮಾಸಿಕ ಆಧಾರದಲ್ಲಿ ಚಕ್ರಬಡ್ಡಿ ಹಾಕುವುದು ಬ್ಯಾಂಕಿಂಗಿನ ಅಂಗೀಕೃತ ಆಚರಣೆ ಎಂದು ತೋರಿಸಿಕೊಟ್ಟಿಲ್ಲವೆಂದು ಕೂಡ ನ್ಯಾಯಾಲಯ ನಿರ್ಣಯಿಸಿತು. ಮಾಸಿಕ ಆಧಾರದ ಮೇಲೆ ಬಡ್ಡಿಯನ್ನು ವಿಧಿಸಲು ಪ್ರಸಕ್ತ ಅವಧಿಯಲ್ಲಿ ಬ್ಯಾಂಕಿಗೆ ರಿಸರ್ವ್ ಬ್ಯಾಂಕ್ ನೀಡಿದ ಯಾವ ನಿರ್ದೇಶವೂ ಇಲ್ಲ. ಆದುದರಿಂದ ಆ ರೀತಿ ಬಡ್ಡಿ ವಿಧಿಸುವುದು ದುಬಾರಿ ಹಾಗೂ ಅಸಾಧು. ಈ ಮೇಲಣ ದೃಷ್ಟಿ ಅಡಮಾನದ ದಿನಾಂಕದಿಂದ ವಾರ್ಷಿಕ ಲೆಕ್ಕದ ಮೇಲೆ ಸಾಲಿಯಾನ ಶೇ. 12½ ಬಡ್ಡಿ ವಿಧಿಸುವುದರಿಂದ ಈ ಪ್ರಕರಣಕ್ಕೆ ನ್ಯಾಯಸಂದಂತೆ ಮತ್ತು ಅದು ರಿಸರ್ವ್ ಬ್ಯಾಂಕಿನ ನಿರ್ದೇಶಗಳಿಗೆ ವಿರುದ್ಧವಾಗಿಯೂ ಇಲ್ಲವೆಂದು ನ್ಯಾಯಾಲಯ ನಿರ್ಣಯಿಸಿತು.

ಎರಡನೆಯ ಅಂಶವಾದ ದಂಡಬಡ್ಡಿಯ ದರವನ್ನು ಕುರಿತಂತೆ ಈ ವಹಿವಾಟಿನಲ್ಲಿ ದಂಡಬಡ್ಡಿ ವಿಧಿಸಲು ಯಾವುದೇ ಶರತ್ತೂ ಇರಲಿಲ್ಲವೆಂಬುದನ್ನು ಒಪ್ಪಿಕೊಳ್ಳಲಾಯಿತು. ಆದ್ದರಿಂದ ದಂಡಬಡ್ಡಿಯನ್ನು ವಿಧಿಸುವುದಕ್ಕೆ ಅಧಿಕಾರವಿಲ್ಲ. ಸೇವಾಶುಲ್ಕಗಳನ್ನು ಕುರಿತಂತೆ, ಜನವರಿ 1978ರಿಂದ ಪ್ರತಿಶತ ಒಂದರ ಇಪ್ಪತ್ತನೇ ಒಂದಂಶದಷ್ಟು, ಗರಿಷ್ಠ ರೂ. 2,500ರ ತನಕ, ಸಂಸ್ಕರಣ ಶುಲ್ಕವನ್ನು ಬ್ಯಾಂಕು ಒಂದೇ ಸಾರಿ ವಿಧಿಸಬಹುದೆಂದು ಬ್ಯಾಂಕುಗಳಿಗೆ ಅಧಿಕಾರ ನೀಡಿ ರಿಸರ್ವ್ ಬ್ಯಾಂಕ್ ಇತ್ತಿರುವ ನಿರ್ದೇಶದ ಆಧಾರದ ಮೇಲೆ ಒಂದೇ ಬಾರಿಗೆ ರೂ. 2,500 ಶುಲ್ಕವನ್ನು ವಿಧಿಸಲು ನ್ಯಾಯಾಲಯ ಅನುಮತಿ ನೀಡಿತು. ಅಷ್ಟೇ ಅಲ್ಲದೆ, ರಿಸರ್ವ್ ಬ್ಯಾಂಕ್ ನೀಡಿದ ಸಾಮಾನ್ಯ ಮಾರ್ಗದರ್ಶಿ ಸೂತ್ರಗಳು, ಸಂಕಷ್ಟದಲ್ಲಿರುವ ಅರ್ಹ ಸಾಲಗಾರನಿಗೆ, ದುಬಾರಿ ಬಡ್ಡಿ ಕಾನೂನುಗಳ ಅಡಿಯಲ್ಲಿ ಪರಿಹಾರ ನೀಡಲು ನ್ಯಾಯಾಲಯಗಳಿಗಿರುವ ಅಧಿಕಾರವನ್ನು ಅತಿಕ್ರಮಿಸಲಾರವೆಂದೂ ನಿರ್ಣಯಿಸಲಾಯಿತು. ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮದ ಉದ್ದೇಶ ದುಬಾರಿ ಬಡ್ಡಿ ಅಧಿನಿಯಮದ ಉದ್ದೇಶಕ್ಕಿಂತ ತೀರ ಭಿನ್ನವಾದದ್ದು. ಒಂದು, ರಾಷ್ಟ್ರಹಿತಕ್ಕಾಗಿ ಬ್ಯಾಂಕಿಂಗ್ ಕರಾರು ಹಾಗೂ ನಿಯಮನವನ್ನು ಕುರಿತದ್ದಾದರೆ, ಮತ್ತೊಂದು, ಕೇಳಲಾದ ಬಡ್ಡಿಯು ನಿಗದಿತ ಕಟ್ಟಳೆಗಳ ದೃಷ್ಟಿಯಲ್ಲಿ ನ್ಯಾಯದೂರವಾದ್ದು ಅಥವಾ ಅತಿಯಾದ್ದು ಎಂದು ಕಂಡುಬಂದಾಗ ಋಣಿಗೆ ಪರಿಹಾರ ನೀಡುವ ಉದ್ದೇಶವುಳ್ಳದ್ದು. ತತ್ಫಲವಾಗಿ ಮೇಲ್ಮನವಿಯನ್ನು ಪುರಸ್ಕರಿಸಲಾಯಿತು ಮತ್ತು ನ್ಯಾಯಾಲಯದ ಅಭಿಪ್ರಾಯಗಳ ದೃಷ್ಟಿಯಲ್ಲಿ ದಾವೆಯ ಗುಣಾವಗುಣಗಳ ಆಧಾರದ ಮೇಲೆ ವಿಲೇವಾರಿಗಾಗಿ ಕೆಳ ನ್ಯಾಯಾಲಯಕ್ಕೆ ಪ್ರಕರಣವನ್ನು ಹಿಂದಿರುಗಿಸಲಾಯಿತು.

---

## ಬಡ್ಡಿ ದರದಲ್ಲಿ ಏರಿಕೆ

1984–85ನೆಯ ಸಾಲಿಗೆ ನೌಕರರ ಭವಿಷ್ಯ ನಿಧಿಯ ವಂತಿಗೆಯ ಮೇಲಿನ ಬಡ್ಡಿ ದರವನ್ನು ಶೇ. 9.9ಕ್ಕೆ ಕೇಂದ್ರ ಸರ್ಕಾರ ಹೆಚ್ಚಿಸಿದೆ. ಇದಕ್ಕೆ ಹಿಂದಿನ ವರ್ಷ ಬಡ್ಡಿ ದರ ಶೇ. 9.15 ಆಗಿತ್ತು.

# ಪಾರಿಭಾಷಿಕ ಶಬ್ದಕೋಶ

ಪಾ. ರಾಜಗೋಪಾಲ
ಜಿ. ಎನ್. ನರಸಿಂಹಮೂರ್ತಿ

**Banker and Customer :** ಬ್ಯಾಂಕರ್ ಮತ್ತು ಗ್ರಾಹಕ. ಬ್ಯಾಂಕರ್ ಮತ್ತು ಗ್ರಾಹಕರ ಸಂಬಂಧ ಸಾಮಾನ್ಯವಾಗಿ ಋಣಿ ಮತ್ತು ಧನಿಗಳ ನಡುವಣ ಸಂಬಂಧದಂತೆ ಇರುತ್ತದೆ. ಗ್ರಾಹಕ ಬ್ಯಾಂಕಿನಲ್ಲಿ ಹಣ ಜಮೆ ಮಾಡಿದಾಗ ಗ್ರಾಹಕ ಬ್ಯಾಂಕರನ ಧನಿಯೂ ಗ್ರಾಹಕ ತನ್ನ ಬ್ಯಾಂಕ್ ಖಾತೆಯಿಂದ ಮೀರೆಳೆತ ಮಾಡಿದಾಗ ಬ್ಯಾಂಕರನ ಋಣಿಯೂ ಆಗುತ್ತಾನೆ. ಬ್ಯಾಂಕರನು ಗ್ರಾಹಕನಿಂದ ಪಡೆದ ಹಣವನ್ನು ತನ್ನ ವಿವೇಚನೆಗೆ ಅನುಸಾರ ಬಳಸುವ ಹಕ್ಕನ್ನು ಹೊಂದಿರುತ್ತಾನೆ. ಆದರೆ ಗ್ರಾಹಕ ತನ್ನ ಖಾತೆಯಲ್ಲಿ ಜಮೆ ಮಾಡಿದ ಮೊಬಲಗನ್ನು ತಾನು ಇಚ್ಛಿಸಿದಾಗ ವಾಪಸ್ಸು ಪಡೆಯುವ ಅಥವಾ ತನ್ನ ಇಚ್ಛೆಗೆ ಅನುಸಾರ ಪಾವತಿ ಮಾಡಬೇಕೆಂದು ಬ್ಯಾಂಕರನಿಗೆ ಆದೇಶ ನೀಡುವ ಹಕ್ಕು ಪಡೆದಿರುತ್ತಾನೆ. ಗ್ರಾಹಕನ ಈ ಹಕ್ಕನ್ನು ಮನ್ನಿಸಿ ಚೆಕ್ಕನ್ನು ಗ್ರಾಹಕನ ಆದೇಶದಂತೆ ಪಾವತಿ ಮಾಡುವುದು ಬ್ಯಾಂಕರನ ಹೊಣೆ. ಬ್ಯಾಂಕ್-ಗ್ರಾಹಕ ಸಂಬಂಧ ಸಾಮಾನ್ಯವಾದ ವಾಣಿಜ್ಯಕ ಋಣಿ-ಧನಿ ಸಂಬಂಧದಂತೆಯೇ ಇರುತ್ತದೆ. ಆದರೆ ಗ್ರಾಹಕ ಕೇಳಿದಾಗಲ್ಲದೆ ಬ್ಯಾಂಕರ್ ಆ ಹಣವನ್ನು ಪಾವತಿ ಮಾಡಬೇಕಾದ್ದಿಲ್ಲ. ಗ್ರಾಹಕನ ಖಾತೆಯ ಮೊಬಲಗಿಗೆ ಬ್ಯಾಂಕರು ಅವನ ನ್ಯಾಸ ಧಾರಕನಾಗುವುದಿಲ್ಲ. ಬ್ಯಾಂಕಿನ ಯಾವ ಶಾಖೆಯಲ್ಲಿ ಗ್ರಾಹಕನ ಖಾತೆ ಇರುತ್ತದೋ ಆ ಶಾಖೆಯ ಮೇಲೆ ಮಾತ್ರ ಡ್ರಾ ಮಾಡಲು ಗ್ರಾಹಕನ ಹಕ್ಕು ಸೀಮಿತವಾಗಿರುತ್ತದೆ. ಗ್ರಾಹಕನ ಚೆಕ್ಕುಗಳನ್ನು ಆದರಿಸಬೇಕೆಂಬ ಬ್ಯಾಂಕರನ ಹೊಣೆ ಆತನ ವ್ಯವಹಾರದ ದಿನಗಳಿಗೆ ಹಾಗೂ ವ್ಯವಹಾರದ ವೇಳೆಗೆ ಮಾತ್ರ ಸೀಮಿತವಾದ್ದು. ರಜಾ ದಿನಗಳಲ್ಲೂ, ವ್ಯವಹಾರದ ವೇಳೆಯ ಅನಂತರವೂ ಚೆಕ್ಕುಗಳನ್ನು ಅವನು ಪಾವತಿ ಮಾಡಬೇಕಾದ್ದಿಲ್ಲ. ಬ್ಯಾಂಕು ತನ್ನ ವ್ಯವಹಾರಗಳನ್ನು ನಿಲ್ಲಿಸಿಬಿಟ್ಟಾಗ ಅಥವಾ ಅದು ಅವಸಾಯನಗೊಂಡಾಗ ಗ್ರಾಹಕನ ಖಾತೆಯ ಧನಿಕೆ ಸಿಲ್ಕು ಮೊಬಲಗು ತತ್‌ಕ್ಷಣ ಪಾವತಿಯೋಗ್ಯವಾಗುತ್ತದೆ. ಆಗ ಗ್ರಾಹಕ ಬೇಡಿಕೆ ಸಲ್ಲಿಸಬೇಕಾದ ಅಗತ್ಯವಿಲ್ಲ. ಒಬ್ಬನೇ ಖಾತೆದಾರನ ಹೆಸರಿನಲ್ಲಿ ಒಂದಕ್ಕಿಂತ ಹೆಚ್ಚು ಖಾತೆಗಳಿದ್ದಾಗ ಅವನ್ನು ಪರಸ್ಪರ ಉತ್ತಾರ ಹಾಕಿಕೊಳ್ಳುವ, ಕೂಡಿಸುವ ಅಥವಾ ಬೆರಸುವ ಹಕ್ಕು ಬ್ಯಾಂಕರಿನಿಗಿರುವುದಿಲ್ಲ. ಗ್ರಾಹಕನ ಖಾತೆಯ ಮತ್ತು ವ್ಯವಹಾರಗಳ ಬಗ್ಗೆ ಗೋಪ್ಯತೆಯನ್ನು ಕಾಯ್ದುಕೊಳ್ಳುವುದಕ್ಕೆ ಬ್ಯಾಂಕರ್ ಬಾಧ್ಯನಾಗಿರುತ್ತಾನೆ. ಗ್ರಾಹಕನ ಖಾತೆಗೆ ಸಂಬಂಧಿಸಿದಂತೆ ಅದರಲ್ಲಿಯ ನಿಗದಿಯಾದ ಹಣವನ್ನು ಪಾವತಿಮಾಡತಕ್ಕದ್ದಲ್ಲವೆಂದು ನ್ಯಾಯಾಲಯದ ಆದೇಶ ಬಂದಾಗ (ಗಾರ್ನಿಷಿ ಆದೇಶ) ಬ್ಯಾಂಕು ಆ ಮೊಬಲಗನ್ನು ತಡೆಹಿಡಿಯಬೇಕು. ಗ್ರಾಹಕನ ಖಾತೆಯು ಅಡಿಯಲ್ಲಿ ತನಗೆ ಬರಬೇಕಾದ ಹಣಕ್ಕಾಗಿ ಬ್ಯಾಂಕು ತನ್ನ ಸುಪರ್ದಿನಲ್ಲಿರುವ ಅವನ ಯಾವುದೇ ಆಸ್ತಿಯನ್ನು ಇಟ್ಟುಕೊಂಡಿರಲು ಕೆಲವು ಉಪಾಧಿಗಳಿಗೆ ಒಳಪಟ್ಟು ಹಕ್ಕು ಹೊಂದಿರುತ್ತಾನೆ. ಇದು ಅವನ ಧರಣಾಧಿಕಾರ. ಗ್ರಾಹಕ ಬ್ಯಾಂಕರನಿಗೆ ಪಾವತಿ ಮಾಡಿದ ಹಣವನ್ನು ಗ್ರಾಹಕ ಸೂಚಿಸಿದ ರೀತಿಯಲ್ಲೇ ವಿನಿಯೋಗಿಸಬೇಕು. ಗ್ರಾಹಕನಿಂದ ಅಂಥ ಸೂಚನೆಯೇನೂ ಇಲ್ಲದಿದ್ದಾಗ ಬ್ಯಾಂಕರ್ ತನ್ನ ಇಚ್ಛೆಗೆ ಅನುಗುಣವಾಗಿ ಗ್ರಾಹಕನಿಗೆ ಸಂಬಂಧಿಸಿದ ಯಾವ ಖಾತೆಗಾದರೂ ಜಮೆ ಮಾಡಬಹುದು. ಬ್ಯಾಂಕರ್–ಗ್ರಾಹಕ ಋಣಕ್ಕೆ ಲಿಮಿಟೇಷನ್ ಅವಧಿಯ ಎಣಿಕೆ ಆರಂಭವಾಗುವುದು ಗ್ರಾಹಕ ಕೇಳಿಕೆ ಸಲ್ಲಿಸಿದಂದಿನಿಂದ ಮಾತ್ರ.

**Banker as an Agent :** ಅಭಿಕರ್ತನಾಗಿ (ಏಜೆಂಟನಾಗಿ) (ಮುತಾಲಿಕನಾಗಿ) ಬ್ಯಾಂಕರ. ಬ್ಯಾಂಕರ್ ಮತ್ತು ಗ್ರಾಹಕ ಇವರ ಸಂಬಂಧ ಋಣಿ-ದನಿಯರದಾದರೂ ಅನೇಕ ಸಂದರ್ಭಗಳಲ್ಲಿ ಬ್ಯಾಂಕರ್ ತನ್ನ ಗ್ರಾಹಕನ ಅಭಿಕರ್ತನಾಗಿ ಕಾರ್ಯ ನಿರ್ವಹಿಸುತ್ತಾನೆ. ಗ್ರಾಹಕನ ಚೆಕ್ಕುಗಳನ್ನು ಸ್ವೀಕರಿಸಿ ಅವುಗಳನ್ನು ವಸೂಲಿ ಮಾಡುವುದು, ಹುಂಡಿಗಳನ್ನು ಅವನಿಗಾಗಿ ಒಪ್ಪುವುದು, ಗ್ರಾಹಕನ ಸ್ಥಾಯೀ ಆದೇಶಗಳಿಗೆ ಅನುಗುಣವಾಗಿ ಪಾವತಿ ಮಾಡುವುದು—ಇವು ಬ್ಯಾಂಕರನ ಕೆಲವು ಅಭಿಕರಣ, ಏಜೆನ್ಸಿ, ಅಥವಾ ಮುತಾಲಿಕೆ ಕಾರ್ಯಗಳು.

**Bankers' Almanac :** ಬ್ಯಾಂಕರರ ಪಂಜಿಕೆ, ಬ್ಯಾಂಕರರ ಸೂಚಿಪುಸ್ತಕ. ಪ್ರಪಂಚದ ಎಲ್ಲೆಡೆಗಳ ಬ್ಯಾಂಕುಗಳ ಹೆಸರು ವಿಳಾಸ ಹಾಗೂ ಹಣಕಾಸು ಸಂರಚನೆಯ ವಿವರಗಳನ್ನೊಳಗೊಂಡ ಕೈಪಿಡಿ.

**Bankers' Bank :** ಬ್ಯಾಂಕರರ ಬ್ಯಾಂಕು. ಬ್ಯಾಂಕರುಗಳಿಂದ ಠೇವಣಿ ಸ್ವೀಕರಿಸಿ ಅವರ ಆಪತ್ಸಮಯದಲ್ಲಿ ಹಣಸಹಾಯ ನೀಡುವ ಬ್ಯಾಂಕ್. ಸಾಮಾನ್ಯವಾಗಿ ಇದು ದೇಶದ ಕೇಂದ್ರೀಯ ಬ್ಯಾಂಕ್ ಆಗಿರುತ್ತದೆ.

**Bankers' Book Evidence Act :** ಬ್ಯಾಂಕರರ ಪುಸ್ತಕಗಳ ಸಾಕ್ಷ್ಯ ಅಧಿನಿಯಮ. 1891ರಲ್ಲಿ ಇದು ಜಾರಿಗೆ ಬಂತು. ಯಾವುದೇ ವಿವಾದದಲ್ಲಿ ಬ್ಯಾಂಕು ತೊಡಗಿದಾಗ ಅಥವಾ ಬ್ಯಾಂಕಿನಿಂದ ಸಾಕ್ಷ್ಯವನ್ನು ಒದಗಿಸಬೇಕಾದಾಗ ಅದು ಹೇಗೆ ನಡೆದುಕೊಳ್ಳಬೇಕೆಂಬುದನ್ನು ಕುರಿತ ಕಾನೂನು.

ಬ್ಯಾಂಕರ್ ತನ್ನ ಪಹಣಿ, ರೋಜಾಪುಸ್ತಕ, ನಗದು ಪುಸ್ತಕ, ಖಾತಾಪುಸ್ತಕ ಇತ್ಯಾದಿಗಳಲ್ಲಿಯ ನಮೂದುಗಳನ್ನು ಅಥವಾ ತತ್ಸಂಬಂಧಿಯಾದ ಅಂಶಗಳನ್ನು ನ್ಯಾಯಾಲಯದ ಆದೇಶದ ಮೇರೆಗೆ ನಕಲನ್ನು ಮಾಡಿ ಪ್ರಮಾಣೀಕರಿಸಿ ಸಲ್ಲಿಸಬೇಕು. ಈ ಕಾನೂನಿನ ಪ್ರಕಾರ ಬ್ಯಾಂಕರ ತನ್ನ ಪುಸ್ತಕಗಳ ನಕಲನ್ನು ಒದಗಿಸಬೇಕು. ಇಲ್ಲವೇ ನ್ಯಾಯಾಲಯದ ಆದೇಶ ಇದ್ದರೆ ಮಾತ್ರ, ಅದರಿಂದ ಆದೇಶಿತರಾದವರಿಗೆ ತನ್ನ ಪುಸ್ತಕಗಳನ್ನು ಪರೀಕ್ಷಿಸಲು ಅವಕಾಶ ನೀಡಬೇಕು. ನಕಲನ್ನು ಆಪಾತತಃ ಸಾಕ್ಷ್ಯವೆಂದು ಪರಿಗಣಿಸಲಾಗುವುದು.

**Bankers' Cheque :** ಬ್ಯಾಂಕರನ ಚೆಕ್ಕು. ತನ್ನ ಸ್ಥಳೀಯ ಪಾವತಿಗಾಗಿ, ತನ್ನ ಮೇಲೆ ಬ್ಯಾಂಕು ನೀಡುವ ಚೆಕ್ಕು. ತೀರುವೆಗಾಗಿ ಅಥವಾ ಗ್ರಾಹಕನ ಹಣದ ವರ್ಗಾವಣೆಗಾಗಿ ಇದನ್ನು ನೀಡುತ್ತದೆ.

**Bankers' Club :** ಬ್ಯಾಂಕರರ ಸಂಘ.

**Bankers' lien :** ಬ್ಯಾಂಕರನ ಧರಣಾಧಿಕಾರ. ಬ್ಯಾಂಕರನಿಗೆ ತನ್ನ ಗ್ರಾಹಕನಿಂದ ಬರಬೇಕಾದ ಹಣಕ್ಕಾಗಿ ಅವನ ಯಾವುದೇ ಆಸ್ತಿಯನ್ನು ಈಡಾಗಿ ಇಟ್ಟುಕೊಳ್ಳುವ ಹಕ್ಕು. ನೋಡಿ : Banker and Customer.

**Bankers' Mortgage :** ಬ್ಯಾಂಕರನ ಅಡಮಾನ. ಅಡಮಾನದಲ್ಲಿ ಹಲವು ಬಗೆಗಳಿವೆ. ಬ್ಯಾಂಕುಗಳು ತಮಗೆ ಸರಿ ಕಂಡ ವಿಧಾನದ ಅಡಮಾನ ಪದ್ಧತಿಯನ್ನು ಅನುಸರಿಸುತ್ತವೆ. ಆದರೆ ಎಲ್ಲ ವಿಧಾನಗಳ ಅಡಮಾನ ಪದ್ಧತಿಗಳಲ್ಲಿ ಸಾಮಾನ್ಯವಾದ ಕೆಲವು ಅಂಶಗಳಿವೆ: 1 ಅಡವು ನಿರಂತರ ಭದ್ರತೆಯಾಗಿ ಒದಗುತ್ತದೆ. 2 ಅಡವುದಾರ ಬ್ಯಾಂಕು ಬೇಡಿದಾಗ ಹಣ ಪಾವತಿ ಮಾಡಬೇಕಾಗುತ್ತದೆ. 3 ಇದಕ್ಕೆ ತಪ್ಪಿದಲ್ಲಿ ಅಡವಿಟ್ಟ ಆಸ್ತಿಯ ಯುಕ್ತ ವಿಕ್ರಯದ ಮೂಲಕ ಹಣ ಪಡೆಯುವ ಹಕ್ಕು ಬ್ಯಾಂಕರನಿಗಿರುತ್ತದೆ. 4 ಅಡವಿನ ಆಸ್ತಿಯನ್ನು ಬಾಡಿಗೆಗೆ ಕೊಡಲು ಬ್ಯಾಂಕರನ ಅನುಮತಿ ಅಗತ್ಯ.

**Bankers' Opinion :** ಬ್ಯಾಂಕರನ ಅಭಿಪ್ರಾಯ. ಇನ್ನೊಬ್ಬ ಬ್ಯಾಂಕರು ಗ್ರಾಹಕನ ಬಗ್ಗೆ ಮಾಹಿತಿ ಕೇಳಿದಾಗ ಬ್ಯಾಂಕರು ನೀಡುವ ಅಭಿಪ್ರಾಯ. ಇದನ್ನು ಬ್ಯಾಂಕರನ ವರದಿ ಎಂದೂ ಹೇಳಲಾಗುತ್ತದೆ. ನೋಡಿ : Bank Reference.

**Banker's Receipt :** ಬ್ಯಾಂಕರನ ರಸೀದಿ. ಒಂದು ಸಂಸ್ಥೆಯ ಪರವಾಗಿ ಷೇರು ಹಣವನ್ನು ಸ್ವೀಕರಿಸಿದ್ದಕ್ಕಾಗಿ ಬ್ಯಾಂಕು ನೀಡುವ ರಸೀದಿ.

**Banker's Report :** ಬ್ಯಾಂಕರನ ವರದಿ. ನೋಡಿ : Banker's Opinion.

**Bank Group :** ಬ್ಯಾಂಕ್ ವೃಂದ.

**Bank Guarantee :** ಬ್ಯಾಂಕ್ ಖಾತರಿ. ನೋಡಿ : Guarantee.

**Bank Holidays :** ಬ್ಯಾಂಕ್ ರಜಾ ದಿನಗಳು. ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ಎರಡೂ ಸರ್ಕಾರಗಳು ಪರಕ್ರಾಮ್ಯ ಸಂಲೇಖಗಳ ಅಧಿನಿಯಮದ ೨೫ನೆಯ ಪ್ರಕರಣದ ಪ್ರಕಾರ ಬ್ಯಾಂಕುಗಳ ರಜಾ ದಿನ ಎಂದು ಘೋಷಿಸಿದ ದಿನಗಳು.

**Banking Assets :** ಬ್ಯಾಂಕಿಂಗ್ ಆಸ್ತಿಗಳು. ಬ್ಯಾಂಕು ನೀಡುವ ಸಾಲಗಳು ಮತ್ತು ಮುಂಗಡಗಳು. ಬ್ಯಾಂಕಿನ ಅಢಾವೆ ಪತ್ರಿಕೆಯಲ್ಲಿ ಆಸ್ತಿಗಳ ಪಟ್ಟಿಯಲ್ಲಿ ಬರುವ, ಬ್ಯಾಂಕಿಂಗ್ ವ್ಯವಹಾರಕ್ಕೆ ನೇರವಾಗಿ ಸಂಬಂಧಿಸಿದ ಆಸ್ತಿಗಳು.

**Banking Business :** ಬ್ಯಾಂಕಿಂಗ್ ವ್ಯವಹಾರ. ನೋಡಿ : Bank.

**Banking Companies (Acquisition and Transfer of Undertaking) Act 1970 :** 1970ರ ಬ್ಯಾಂಕಿಂಗ್ ಕಂಪನಿಗಳ (ಸ್ವಾಧೀನ ಮತ್ತು ಉದ್ಯಮ ವರ್ಗಾವಣೆ) ಅಧಿನಿಯಮ. 1969ರಲ್ಲಿ ಭಾರತ ಸರ್ಕಾರ 14 ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಲು ತಂದ ಅಧ್ಯಾದೇಶಕ್ಕೆ (ಸುಗ್ರೀವಾಜ್ಞೆ) ರೂಪ ನೀಡಲು ಅಂಗೀಕರಿಸಲಾದ ಅಧಿನಿಯಮ.

**Banking Companies' Act :** ಬ್ಯಾಂಕಿಂಗ್ ಕಂಪನಿಗಳ ಅಧಿನಿಯಮ. ಇದು 1966ರ ಮಾರ್ಚ್ 1ರಿಂದ ಬ್ಯಾಂಕಿಂಗ್ ವಿನಿಯಮ ಅಧಿನಿಯಮ ಎಂದು ಪುನರ್ ನಾಮಕರಣ ಹೊಂದಿತು. ನೋಡಿ : Banking Regulations Act.

**Banking Department :** ಬ್ಯಾಂಕಿಂಗ್ ಇಲಾಖೆ. ಸಾಮಾನ್ಯ ಬ್ಯಾಂಕಿಂಗ್ ವ್ಯವಹಾರಗಳನ್ನು ನಡೆಸುವ, ರಿಸರ್ವ್ ಬ್ಯಾಂಕಿನ ಒಂದು ಇಲಾಖೆ.

**Banking Habit :** ಬ್ಯಾಂಕಿಂಗ್ ಅಭ್ಯಾಸ.

**Banking Hours :** ಬ್ಯಾಂಕ್ ವ್ಯವಹಾರ ವೇಳೆ. ಬ್ಯಾಂಕು ಪ್ರತಿ ನಿತ್ಯ ವ್ಯವಹಾರ ನಡೆಸುವ ವೇಳೆ. ಅಕಸ್ಮಾತ್ ಈ ವೇಳೆಯಲ್ಲಿ ವ್ಯತ್ಯಾಸವಾಗುವ ಸಂದರ್ಭದಲ್ಲಿ ಮುಂಚಿತವಾಗಿ ಅದನ್ನು ಸಾರ್ವಜನಿಕರಿಗೆ ತಿಳಿಸಬೇಕಾದ್ದು ಬ್ಯಾಂಕಿನ ಕರ್ತವ್ಯ.

**Banking Law :** ಬ್ಯಾಂಕಿಂಗ್ ಕಾನೂನು.

**Banking Legislation :** ಬ್ಯಾಂಕಿಂಗ್ ಶಾಸನ.

**Banking Operations :** ಬ್ಯಾಂಕಿಂಗ್ ಕಾರ್ಯಾಚರಣೆಗಳು.

**Banking Policy :** ಬ್ಯಾಂಕಿಂಗ್ ನೀತಿ.

**Banking Principle :** ಬ್ಯಾಂಕಿಂಗ್ ತತ್ತ್ವ.

**Banking Regulations Act :** ಬ್ಯಾಂಕಿಂಗ್ ವಿನಿಯಮ ಅಧಿನಿಮಯ. ಬ್ಯಾಂಕ್ ವ್ಯವಹಾರಕ್ಕೆ ಸಂಬಂಧಪಟ್ಟ ಕಾನೂನುಗಳನ್ನು ಒಂದು ಚೌಕಟ್ಟಿಗೆ ಒಳಪಡಿಸುವ ಮತ್ತು ಅಗತ್ಯವಾದ ಬದಲಾವಣೆಗಳನ್ನು ಜಾರಿಗೆ ತರುವ ಉದ್ದೇಶದಿಂದ ಈ ಅಧಿನಿಯಮ 1949ರಲ್ಲಿ ಜಾರಿಗೆ ಬಂತು.

**Banking Sector :** ಬ್ಯಾಂಕಿಂಗ್ ವಲಯ.

**Banking Structure :** ಬ್ಯಾಂಕಿಂಗ್ ಸಂರಚನೆ.

**Banking System :** ಬ್ಯಾಂಕಿಂಗ್ ವ್ಯವಸ್ಥೆ. ಇದರಲ್ಲಿ ಎರಡು ಬಗೆಗಳಿವೆ : ೧) ಏಕಘಟಕ ಬ್ಯಾಂಕಿಂಗ್ ವ್ಯವಸ್ಥೆ, ೨) ಶಾಖಾ ಬ್ಯಾಂಕಿಂಗ್ ವ್ಯವಸ್ಥೆ.

**Banking Transaction :** ಬ್ಯಾಂಕಿಂಗ್ ವಹಿವಾಟು. ಬ್ಯಾಂಕಿನ ಪುಸ್ತಕಗಳ ಮೂಲಕ ಸಾಗುವ ಯಾವುದೇ ಆರ್ಥಿಕ ವಹಿವಾಟು.

**Bank Insolvency :** ಬ್ಯಾಂಕ್ ದಿವಾಳಿತನ. ವ್ಯವಹಾರಲೋಪದಿಂದಾಗಲಿ ಇತರ ಕಾರಣಗಳಿಂದಾಗಲಿ ಬ್ಯಾಂಕಿನ ಬಂಡವಾಳಕ್ಕೆ ಹಾನಿ ಉಂಟಾಗಿ ಅದು ತನ್ನ ಹೊಣೆಯನ್ನು ಪೂರೈಸಲಾಗದಂಥ ಸ್ಥಿತಿ.

**Bank Nationalisation :** ಬ್ಯಾಂಕ್ ರಾಷ್ಟ್ರೀಕರಣ. ಖಾಸಗಿ ಒಡೆತದಲ್ಲಿದ್ದ ಬ್ಯಾಂಕುಗಳನ್ನು ಸರ್ಕಾರ ತನ್ನ ಒಡೆತನಕ್ಕೆ ತೆಗೆದುಕೊಳ್ಳುವುದು.

**Bank Note :** ಬ್ಯಾಂಕ್ ನೋಟು. ಧಾರಕ ಬೇಡಿದಾಗ ಪಾವತಿ ಮಾಡಬೇಕಾದ, ಯಾವ ಬಡ್ಡಿಯೂ ಇಲ್ಲದ, ವಚನ ಪತ್ರ ; ಹಣಕ್ಕೆ ಪ್ರತಿಯಾಗಬಹುದಾದಂಥದು. ಕೇಂದ್ರ ಬ್ಯಾಂಕ್ ಮಾತ್ರ ಬ್ಯಾಂಕ್ ನೋಟುಗಳನ್ನು ಹೊರಡಿಸುತ್ತದೆ. ಭಾರತದಲ್ಲಿ ರಿಸರ್ವ್ ಬ್ಯಾಂಕ್ ಮಾತ್ರ ಇವನ್ನು ಸಾರ್ವಜನಿಕರಿಗೆ ನೀಡಬಹುದು.

**Bank of Circulation :** ಚಲಾವಣಾ ಬ್ಯಾಂಕು. ನೋಡಿ : Bank of Issue.

**Bank of Discount :** ವಟಾವಣೆ ಬ್ಯಾಂಕು. ವಿನಿಮಯ ಪತ್ರಗಳನ್ನು, ಹುಂಡಿಗಳನ್ನು ವಟಾಯಿಸುವ ಬ್ಯಾಂಕು.

**Bank of England :** ಬ್ಯಾಂಕ್ ಆಫ್ ಇಂಗ್ಲೆಂಡ್. ಇಂಗ್ಲೆಂಡಿನ ಕೇಂದ್ರೀಯ ಬ್ಯಾಂಕ್. ಪ್ರಪಂಚದ ಪ್ರಮುಖ ಬ್ಯಾಂಕುಗಳಲ್ಲೊಂದು. ಕ್ರಿ.ಶ. 1694ರಲ್ಲಿ ಇದು ಸ್ಥಾಪಿತವಾಯಿತು.

**Bank of Issue :** ನೀಡಿಕೆ ಬ್ಯಾಂಕು. ಕಾನೂನುಬದ್ಧವಾಗಿ ಹಣವನ್ನೂ ಬ್ಯಾಂಕು ನೋಟುಗಳನ್ನೂ ಸಾರ್ವಜನಿಕರಿಗೆ ನೀಡುವ ಅಧಿಕಾರವುಳ್ಳ ಬ್ಯಾಂಕು. ಸಾಮಾನ್ಯವಾಗಿ ಪ್ರತಿ ದೇಶದ ಕೇಂದ್ರೀಯ ಬ್ಯಾಂಕು ಈ ಕಾರ್ಯಭಾರವನ್ನು ನಿರ್ವಹಿಸುತ್ತದೆ.

**Bank Paper :** ಬ್ಯಾಂಕ್ ಪತ್ರ. ಬ್ಯಾಂಕಿನ ಹಿಂಬರಹ ಅಥವಾ ಒಪ್ಪಿಗೆ ಪಡೆದ ಯಾವುದೇ ಪತ್ರ.

**Bank Pass-Book :** ಬ್ಯಾಂಕ್ ಪಾಸ್ ಪುಸ್ತಕ. ಠೇವಣಿದಾರನ ಬ್ಯಾಂಕ್ ಖಾತೆಯ ವ್ಯವಹಾರಗಳನ್ನು ದಾಖಲಿಸಿ ಅವನಿಗೆ (ಖಾತೆದಾರನಿಗೆ) ಬ್ಯಾಂಕು ಕೊಡುವ ಪುಸ್ತಕ. ಬ್ಯಾಂಕರನಿಗೂ ಖಾತೆದಾರನಿಗೂ ನಡುವೆ ಇದು ಸಾಗಾಟ (ಪಾಸ್) ನಡಸುತ್ತಿರುವುದರಿಂದ ಇದನ್ನು ಪಾಸ್ ಪುಸ್ತಕವೆನ್ನುತ್ತಾರೆಂದು ಹೇಳಲಾಗಿದೆ.

**Bank Premises :** ಬ್ಯಾಂಕ್ ಆವರಣ. ಬ್ಯಾಂಕ್ ವಠಾರ (ದ.ಕ.)

**Bank rate :** ಬ್ಯಾಂಕ್ ದರ. ದೇಶದ ಕೇಂದ್ರೀಯ ಬ್ಯಾಂಕು ಅಂತಿಮ ಸಾಲ ನೀಡಿಕೆ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುವಾಗ ವಿಧಿಸುವ ಅಧಿಕೃತ ಬಡ್ಡಿ ದರ. ಅದು ಹುಂಡಿಗಳನ್ನು ವಟಾಯಿಸುವ ದರವೂ ಇದೇ. ಸಾಮಾನ್ಯವಾಗಿ ಜಾರಿಯಲ್ಲಿರುವ ಬಡ್ಡಿ ದರಗಳಿಗಿಂತ ಇದು ಅಧಿಕವಾಗಿರುತ್ತದೆ. ಬ್ಯಾಂಕು ದರದ ಚಲನೆಗಳು ಇತರ ದರಗಳ ಮೇಲೆ ಪರಿಣಾಮ ಬೀರುತ್ತವೆ. ತಾತ್ವಿಕವಾಗಿ ಇದು ಉದರಿ ನಿಯಂತ್ರಣದ ಒಂದು ಅಸ್ತ್ರ. ಭಾರತದಲ್ಲಿ ೧೯೩೪ರ ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮದ ೪೯ನೆಯ ಪ್ರಕರಣದ ಪ್ರಕಾರ ರಿಸರ್ವ್ ಬ್ಯಾಂಕು ಹುಂಡಿಗಳನ್ನು ಕೊಳ್ಳುವ ಅಥವಾ ಮರುವಟಾವಣೆ ಮಾಡುವ ಬಗ್ಗೆ ನಿಗದಿಗೊಳಿಸಿ ಪ್ರಕಟಿಸುವ ದರವಿದು.

**Bank reference :** ಬ್ಯಾಂಕ್ ಪರಾಮರ್ಶನ. ಹೊಸ ಖಾತೆ ತೆರೆಯುವ ಸಂದರ್ಭದಲ್ಲಿ ಅಥವಾ ಹೊಸ ವ್ಯವಹಾರ ಪ್ರಾರಂಭ ಮಾಡುವಲ್ಲಿ ಗ್ರಾಹಕರ ಬಗ್ಗೆ ಬೇರೆ ಬ್ಯಾಂಕುಗಳಿಂದ ಮಾಹಿತಿ ಪಡೆಯಲಾಗುತ್ತದೆ. ಈ ಕ್ರಮವನ್ನು ಹೀಗೆಂದು ಕರೆಯಲಾಗುತ್ತದೆ.

**Bank Reserves :** ಬ್ಯಾಂಕ್ ಮೀಸಲುಗಳು. ಶಾಸನದ ಪರಿಮಿತಿಯಲ್ಲಿ ಬರುವ ಎಲ್ಲ ಬ್ಯಾಂಕುಗಳು ತಮ್ಮ ಒಟ್ಟು ಠೇವಣಿಯ ನಿರ್ದಿಷ್ಟ ಶತಾಂಶವನ್ನು ರಿಸರ್ವ್ ಬ್ಯಾಂಕಿನಲ್ಲಿ ನಗದು ಠೇವಾಗಿಡಬೇಕಾಗಿರುತ್ತದೆ. ಇದು ಬ್ಯಾಂಕಿನ ನಗದು ಮೀಸಲು. ದೇಶದ ಕೇಂದ್ರೀಯ ಬ್ಯಾಂಕು ಉದರಿ ನಿಯಂತ್ರಣ ಮಾಡಲು ಇದನ್ನು ಒಂದು ಸಾಧನವಾಗಿ ಬಳಸುತ್ತದೆ. ಬ್ಯಾಂಕುಗಳು ತಮ್ಮ ಠೇವಣಿಗಳಿಗೆ ಅನುಗುಣವಾಗಿ ರಿಸರ್ವ್ ಬ್ಯಾಂಕಿನಲ್ಲಿ ಕಡ್ಡಾಯವಾಗಿ ಇಡಬೇಕಾದ ನಗದು ಮೀಸಲು ಅನುಪಾತವನ್ನು ಹೆಚ್ಚುಕಡಿಮೆ ಮಾಡುವುದರ ಮೂಲಕ ಅವುಗಳ ಉದರಿ ಸೃಷ್ಟಿಸಾಮರ್ಥ್ಯವನ್ನು ವ್ಯತ್ಯಾಸಗೊಳಿಸಲಾಗುತ್ತದೆ.

**Bank Return :** ಬ್ಯಾಂಕ್ ಲೆಕ್ಕ ವರದಿ. ೧ ಬ್ಯಾಂಕಿನ ಶಾಖೆಗಳು ತಮ್ಮ ಪ್ರಧಾನ ಕಛೇರಿಗೆ ತಮ್ಮ ವಹಿವಾಟುಗಳ ಬಗ್ಗೆ ನಿಯತಕಾಲಿಕವಾಗಿ ಕಳುಹಿಸುವ ವರದಿ. ೨ ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮದ ೫೩ನೆಯ ಪ್ರಕರಣದ ಪ್ರಕಾರ ರಿಸರ್ವ್ ಬ್ಯಾಂಕು ಹಣದ ವ್ಯತ್ಯಾಸ ಮತ್ತು ಬ್ಯಾಂಕಿಂಗ್ ವ್ಯವಹಾರಗಳ ಬಗ್ಗೆ ವಾರಾಂತ್ಯದಲ್ಲಿ ಮತ್ತು ವರ್ಷಾಂತ್ಯದಲ್ಲಿ ಸರಕಾರಕ್ಕೆ ಸಲ್ಲಿಸುವ ವರದಿ.

**Bank rate Policy :** ಬ್ಯಾಂಕ್ ದರ ನೀತಿ.

**Bank reconcitiation Statement :** ಬ್ಯಾಂಕ್ ಸಮನ್ವಯ ತಃಖ್ತೆ. ಯಾವುದೇ ದಿನಾಂಕದಂದು ಬ್ಯಾಂಕಿನ ಗ್ರಾಹಕನೊಬ್ಬನ ನಗದಿ ಪುಸ್ತಕದಲ್ಲಿ ತೋರುವಂತೆ ಬ್ಯಾಂಕ್ ಶಿಲ್ಕು, ಅದೇ ದಿನಾಂಕದಂದು ಆ ವ್ಯಕ್ತಿ ಅಥವಾ ಸಂಸ್ಥೆಯ ನಗದಿ ಪುಸ್ತಕದಲ್ಲಿ ಬ್ಯಾಂಕ್ ಕಂಡುಬರುವ ಶಿಲ್ಕು ತಾಳೆಯಾಗದಿರಬಹುದು. ಗ್ರಾಹಕ ನೀಡಿರುವ ಚೆಕ್ಕುಗಳೇ ಮುಂತಾದವನ್ನು ಆ ದಿನಾಂಕದೊಳಗೆ ಇನ್ನೂ ಪಾವತಿಗಾಗಿ ಹಾಜರುಪಡಿಸದಿರುವುದು, ಗ್ರಾಹಕನಿಗೆ ಬಂದಿದ್ದು ವಸೂಲಿಗಾಗಿ ಬ್ಯಾಂಕಿಗೆ ಇರಿಸಾಲು ಮಾಡಿದ ಚೆಕ್ಕುಗಳೇ ಮುಂತಾದವು ಇನ್ನೂ ವಸೂಲಾಗದಿರುವುದು, ಗ್ರಾಹಕನ ಸ್ಥಾಯೀ ಆದೇಶದಂತೆ ಬ್ಯಾಂಕು ಪಾವತಿ ಮಾಡಿರುವ ಅಥವಾ ವಸೂಲು ಮಾಡಿರುವ ಮೊಬಲಗುಗಳು ಪಾಸ್ ಪುಸ್ತಕದಲ್ಲಿ ದಾಖಲಾಗಿದ್ದು ಗ್ರಾಹಕನ ನಗದಿ ಪುಸ್ತಕದಲ್ಲಿನ್ನೂ ನಮೂದಾಗದಿರುವುದು, ಬ್ಯಾಂಕು ವಿಧಿಸಿ ಪಾಸು ಪುಸ್ತಕದಲ್ಲಿ ನಮೂದಾಗಿರುವ ಬ್ಯಾಂಕು ಶುಲ್ಕ, ಬಡ್ಡಿ ಮುಂತಾದವು ಆ ದಿನಾಂಕದೊಳಗೆ ಗ್ರಾಹಕನ ಗಮನಕ್ಕೆ ಬಾರದಿರುವುದು ಮುಂತಾದ ಕಾರಣಗಳಿಂದಾಗಿ ಇವೆರಡೂ ಶಿಲ್ಕುಗಳು ತಾಳೆಯಾಗುವುದಿಲ್ಲ. ಇವನ್ನೆಲ್ಲಾ ತಪಶೀಲಾಗಿ ಬರೆದು ಇವೆರಡನ್ನೂ ತಾಳೆಗೊಳಿಸುವ ತಃಖ್ತೆಯನ್ನು ಈ ಹೆಸರಿನಿಂದ ಕರೆಯುತ್ತಾರೆ.

